# ವಿಜ್ಞಾಪನೆ

---

ಕಾರಣಾಂತರದಿಂದ ಹಳೆಯ ನಾಗರಿಕತೆಯು ಮಾಯವಾಗಿ, ಹೊಸ ನಾಗರಿಕತೆ ಇನ್ನೂ ದೃಢವಾಗದೆ, ಅಂತರಾಳದಲ್ಲಿರುವ, ನಮ್ಮ ಇಂದಿನ ಸಮಾಜದ ಚಿತ್ರವನ್ನು ಈ ನಾಟಕದಲ್ಲಿ ಕೈಲಾದಮಟ್ಟಿಗೆ ಚಿತ್ರಿಸಿ, ಇದಕ್ಕೆ 'ತ್ರಿಶಂಕು ಸ್ವರ್ಗ' ವೆಂಬ ಹೆಸರಿಟ್ಟಿದ್ದೇನೆ. ಕನ್ನಡಿಗರು ಈ ಗ್ರಂಥಕ್ಕೆ ಪ್ರೋತ್ಸಾಹ ಕೊಟ್ಟಾರೆಂದು ನಂಬಿದೇನೆ.

ನಾಟಕ ರಚನೆಯಲ್ಲೂ, ಮುದ್ರಣದಲ್ಲೂ ಅನೇಕ ಸಲಹೆಗಳನ್ನು ಕೊಟ್ಟ ನನ್ನ ಮಿತ್ರಮಂಡಲಿಗೂ ಮತ್ತು 'ಮೋದಿ' ಮುದ್ರಣಾಲಯದವರಿಗೂ, ಈ ಮೂಲಕ ವಂದನೆಗಳನ್ನರ್ಪಿಸುತ್ತೇನೆ.

ನನ್ನ ಮೇಲೆ ವಿಶ್ವಾಸದಿಂದ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟು ಪ್ರೋತ್ಸಾಹಿಸಿದುದಕ್ಕಾಗಿ ನನ್ನ ವಿದ್ಯಾಗುರುಗಳೂ, ಕರ್ನಾಟಕ ನೂತನ ಸಾಹಿತ್ಯ ಪ್ರಪಂಚದಲ್ಲಿ ನುರಿತ ಲೇಖಕರೂ ಆದ, **ಶ್ರೀ 'ಕ್ಷೀರಸಾಗರ'** ರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

೭೯, ಹಲಸೂರು ಪೇಟೆ,
ಬೆಂಗಳೂರು ನಗರ
೭-೧೧-೧೯೩೧

**ಶಿವಾಜಿರಾವ್, ಚಿಂತಾಮಣಿ.**



# ಮುನ್ನುಡಿ

" ತ್ರಿಶಂಕು ಸ್ವರ್ಗ " ವೆಂಬ ಈ ನಾಟಕದಲ್ಲಿ ಶ್ರೀ|| ಶಿವಾಜಿರಾವ್ ಚಿಂತಾಮಣಿಯವರು ಆಧುನಿಕಸಮಾಜದ ಕೆಲವಂಶಗಳನ್ನು ಚಿತ್ರಿಸಿದ್ದಾರೆ. ಈಗ ನಮ್ಮ ಸಮಾಜವು ಒಂದು ವಿಚಿತ್ರಾವಸ್ಥೆಯಲ್ಲಿದೆ; ಹಿಂದಿನ ಸಂಸ್ಕೃತಿಯು ಮಾಯವಾಗುತ್ತಾ ಬಂತು, ನೂತನ ಸಂಸ್ಕೃತಿಯು ಚನ್ನಾಗಿ ಬೇರೂರಿಲ್ಲ. ಇಂತಹ ಸ್ಥಿತಿಯಲ್ಲಿ ಸಮಾಜದಲ್ಲಿ ನಡೆವಳಿಗಳು ಅಸಮಂಜಸ ಕಾಣಬರುವುದು ಸಹಜ. ಆದರೆ ಇವು ಬಹುಕಾಲ ನಿಲ್ಲತಕ್ಕವುಗಳಲ್ಲ. ಯಾವ ಬದಲಾವಣೆಯಾಗುವಾಗಲೂ ಹೀಗಾಗಲೇಬೇಕಷ್ಟೆ. ಸಮಾಜದ ಇಂತಹ ಪರಿಸ್ಥಿತಿಯಲ್ಲಿ ಸಾಮಾಜಿಕ ನಾಟಕಗಳು ಸಾಧ್ಯವಾದಷ್ಟು ಮಟ್ಟಿಗೆ ಮಾರ್ಗದರ್ಶಿಗಳಾಗಿರಬೇಕು. ಪ್ರಕೃತದಲ್ಲಿ ನಾಟಕಕರ್ತೃಗಳು ಈಗಿನ ನಮ್ಮ ಸಮಾಜದಲ್ಲಿ ಕಾಣಬರಬಹುವಾದ ಕೆಲವು ನಡೆವಳಿಗಳ ಅಭಾಸ ವನ್ನು ಚಿತ್ರಿಸಿ, ಕೊನೆಗೆ **ಮಹಾತ್ಮ ಗಾಂಧಿಯವರನ್ನು** ಮಾರ್ಗ ದರ್ಶಿಗಳನ್ನಾಗಿಟ್ಟುಕೊಳ್ಳುವುದು ಸರಿಯೆಂದು ತೋರಿಸಿದ್ದಾರೆ.

ನಾಟಕವು ಸುಲಭವಾದ ಕನ್ನಡದಲ್ಲಿ ಬರೆಯಲ್ಪಟ್ಟಿದೆ. ಅಲ್ಲಲ್ಲಿ ಪಾಮರರಂಜನೆಗೂ ಅವಕಾಶವಿದೆ. ಅಭಿನಯಿಸಲ್ಪಟ್ಟರೆ ಈ ನಾಟಕವು ಕಳೆಗಟ್ಟೀತೆಂಬ ಭರವಸೆಯಿದೆ. ಬೇಕಾದವರಿಗೆ ಮಟ್ಟುಗಳೂ ಇವೆ. ಶ್ರೀ|| ಶಿವಾಜಿರಾವ್ ಚಿಂತಾಮಣಿಯವರು ಉತ್ಸಾಹಶಾಲಿಗಳಾದ ತರುಣರು. ಇಂದಿನ ಅನೇಕ ತರುಣರು ಬರೆಯತೊಡಗಿರುವುದನ್ನು ನೋಡಿ ಉತ್ತೇಜನ ಗೊಂಡು ಈ ತಮ್ಮ ಪ್ರಥಮ ಗ್ರಂಥವನ್ನು ಆಸೆಯಿಂದ ಹೊರಗೆಡವಿದ್ದಾರೆ. ಇಂದಿನ ನೂತನ ಸಾಹಿತ್ಯದ ಚಳವಳಿಯಲ್ಲಿ ಸಾಹಿತ್ಯದೃಷ್ಟಿಯಿಂದ ಯಾವ ಯಾವ ಗ್ರಂಥದ ಭವಿಷ್ಯವು ಏನೇನು ಎಂಬುದನ್ನು ಈಗ ದೃಢವಾಗಿ ಹೇಳ ಬಲ್ಲ ಜ್ಯೋತಿಷ್ಕನಿಲ್ಲ. ನೂತನ ಸಾಹಿತ್ಯವನ್ನು ಪ್ರೋತ್ಸಾಹಿಸುತ್ತಿರುವ ಕನ್ನಡಿಗರಿಂದ ಈ ಹೊಸ ಗ್ರಂಥಕ್ಕೂ ಪ್ರೋತ್ಸಾಹವು ದೊರೆಯಲೆಂದು ಹಾರೈಸುತ್ತೇನೆ.

ಬೆಂಗಳೂರು
೭-೧೧-೧೯೩೧. } " **ಕ್ಷೀರಸಾಗರ.**"

# ಪಾತ್ರಗಳ ವಿವರ.

| | | |
|---|---|---|
| **ಜಯಕುಮಾರ್** | .... | ಆಧುನಿಕ ತರುಣ |
| **ಸುಲೋಚನೆ** | .... | ಅವನ ಹೆಂಡತಿ |
| **ಗೋಪಿಂದರಾವ್** | .... | ಚರಕದಿಂದ ಜೀವಿಸುವ ಗೃಹಸ್ಥ |
| **ಸುಂದರಾಬಾಯಿ** | .... | ಅವನ ಹೆಂಡತಿ |
| **'ಸತ್ಯು'** | .... | ಆಕೆಯ ಮಗ |
| **ಶ್ರೀನಿವಾಸರಾವ್** | .... | ಒಬ್ಬ ಬಡವ |
| **ಇಂದಿರಾಬಾಯಿ** | .... | ಅವನ ಹೆಂಡತಿ |
| **ಮಾಧು** | .... | ಜಯಕುಮಾರನ ಸ್ನೇಹಿತ |
| **ಸುಮಿತ್ರ** | } | ಸುಲೋಚನೆಯ ಗೆಳತಿಯರು |
| **ಮಧುರವಾಣಿ** | } | ಸುಲೋಚನೆಯ ಗೆಳತಿಯರು |
| **ಚಂಚಲೆ** | } | ಸುಲೋಚನೆಯ ಗೆಳತಿಯರು |
| **ಕಮಲಮ್ಮ** | .... | ಸುಂದರಾಬಾಯಿಯ ಗೆಳತಿ |

ಕುರುಬ, ಮೇಸ್ತ್ರಿ, ಪಂಜಾಬಿ ಸಾಹುಕಾರ, ಫೋರ್‌ಮ್ಯಾನ್,
ಶೆಟ್ಟಿ, ನಂಜ ಮುಂತಾದ ಸಾಮಾನ್ಯ ಪಾತ್ರಗಳು.

# ತ್ರಿಶಂಕು ಸ್ವರ್ಗ

## ಅಂಕ ೧.

### ಸ್ಥಾನ ೧.

[ನಾಲ್ಕಾರು ಹುಡುಗರು ಆಟ ಪ್ರಾರಂಭದಲ್ಲಿ ಪ್ರಾರ್ಥಿಸುವುದು]

**ರಾಗ: ಪೂರ್ವಿಕಲ್ಯಾಣಿ.**

ಸರಸಿಜವದನೆ ಶ್ರೀ ಜಗಮಾತೆ |
ಸುರವಂದಿತೆ ಕರುಣಾರಸ ಹೃದಯೆ || ಪ ||
ನಳಿನ ನೇತ್ರೆ ದಯೆತೋರಿ || ಅನುಪ ||
ತೋರಿಬೀರಿದಯ ದುರಿತಹರಿಸೆಯ ! |
ಸಕಲ ಜನರ ಮನಮೋಹಿಪಮಾಯೆ ||
ಕರುಣಾಕರಿ ನೀ ನೆಮ್ಮನು ಸಲಹೇ |
ಸರ್ವಜನಕೆ ಮಂಗಳವನೆ ನೀಡಿ ||

[ಮಾಧುವು 'Newspaper' ಒಂದನ್ನು ಓದುತ್ತ ಬರುವನು.]

**ಮಾಧು:**—ಬಲು ಸೊಗಸಾಗಿದೆ!—ಈ 'Advertisement' (ಜಾಹೀರಾತು) ನೋಡಿದಿರೋ ನೀವೂನೂ.

"Wanted a lady of fortune and education to marry a graduate, proceeding to foreign countries; may be of any caste, creed, age—even if a Widow."

ಕನ್ನಡದಲ್ಲೂ ಇದೆ !

"ಬೇಕಾಗಿದೆ. ಬಿ.ಎ. ಮಾಡಿರುವ ವರನಿಗೆ ಧನವಂತಳಾದ ವಧು ಬೇಕು. ಪಾಶ್ಚಿಮಾತ್ಯ ದೇಶಗಳಿಗೆ ಓದಲು ಹೊರಡುವವನಿದಾನೆ. ವಿಧವೆಯಾಗಲಿ, ಪ್ರೌಢೆಯಾಗಲಿ ಸರಿಯೆ—ಹಣವಂತಳಿರಬೇಕು."

ಇದನ್ನು ಹಾಕಿಸಿರುವ ಸಾಹೇಬರೇ ಇಲ್ಲಿ ದಯಮಾಡಿಸ್ತಿದ್ದಾರೆ. ವಿಚಾರಿಸೋಣ.

**ಜಯು :** 'Good morning to you' ಪೇಪರಿನಲ್ಲೇನು ವಿಶೇಷ. R. T. C. ವಿಚಾರವೇನು?

**ಮಾಧು :** ನಮಗೆ R. T. C. ಬೇಡಪ್ಪಾ. ಈ 'advertisement' ನ್ನ ಯಾರು ಹಾಕಿಸ್ತೋರು ?

[ಪೇಪರನ್ನವನ ಕೈಗೆ ಕೊಡುವನು]

**ಜಯು :** [ನಗುತ್ತಾ] ನಾನೇಕಣೋ. ಏನು ಮಾಡೋದು, ಅಪ್ಪನ್ನ ದುಡ್ಡು ಕೇಳಿದರೆ ಕೊಡೋಲ್ಲ. ಇನ್ನೇನುಮಾಡಲಿ ? ಮಾವನಿಂದ ಸುಲಿದರೆ ಎಲ್ಲರೂ ವರದಕ್ಷಿಣೆ ತೆಗೆದುಕೊಂಡಾ ಅಂತಾರೆ. ಯಾಕಪ್ಪಾ! ಈ ಸಂಕಟ—ಯಾವಳ ಹತ್ತಿರ ದುಡ್ಡಿದ್ದರೆ, ಆಕೆಯನ್ನೇ ಗಿಲೀಟ್ ಮಾಡಿ, ಮದುವೆ ಮಾಡಿಕೊಂಡರೆ—ಆಮೇಲೆ ವಾಪಸ್ ತೊಕೊಳ್ಳಿ [of course with interest.]

**ಮಾಧು :** ಏಕೋ? ನಿನ್ನಷ್ಟು ಸೂಕ್ಷ್ಮ ಬುದ್ಧಿ ಎಲ್ಲಾ 'Graduates' ಗೂ ಇಲ್ಲ. ಇಂಗ್ಲೆಂಡಿಗ್ಹೋಗದಿದ್ದರೆ, ನಿನಗೆ ಓದೋದೇ ಆಗೋಲ್ಲ ಕಣೋ. ಕಾಫಿಗೆ ಕೈಲಿ ಕಾಸಿಲ್ಲದಿದ್ದರೂ ಏನು 'castles build' ಮಾಡ್ತಾರಪ್ಪಾ!

**ಜಯು :** ನಿನಗೇನು ಗೊತ್ತು? ಈಗ್ಲೆ ಸುಮಾರು ಒಂದು ಡಜನ್ 'offers' ಬಂದಿದೆ. ಯಾರು ಸರಿಹೋಗ್ತಾರೋ ನೋಡ್ತೇನೆ. 'Foreign returned' ಅಂದ್ರೇನೇ ಸಾಕು, ಇನ್ನೂರು, ಮುನ್ನೂರು ರೂಪಾಯಿ 'Starting' ಕೊಟ್ಟುಬಿಡ್ತಾರೆ. ಆಗ 'Castle Building' ಅಲ್ಲ 'Fortune Building' ಗೊತ್ತೊ ?

**ಮಾಧು :** 'Tank' ನಲ್ಲಿ 'Petrol' ಲೇ ಇಲ್ಲ! ಏನು 'Start' ಮಾಡ್ತಾರೆಯೋಪ್ಪಾ. ಎಲ್ಲೆಲ್ಲೂ 'Retrenchment'!!

**ಜಯು :** ಆಗಲಿ ದೇವರಿದಾನೆ. ನೀನೊಬ್ಬ 'Pessimist' ಈ ಕಾಲಕ್ಕೆ ಲಾಯಖಿಲ್ಲ, ಕಾಫಿ ತಕೊಳ್ಳೋಣ ಬಾ. [ಕೈಯಲ್ಲಿದ್ದ ಗಡಿಯಾರ ನೋಡಿ] ಎಂಟು ಗಂಟೆಗೆ ಸರಿಯಾಗಿ ಯಾರೋ ನನ್ನನ್ನು ಕಾಣಲು ಬರುವರಂತೆ, ನಾನು ಹೋಗಬೇಕು ಬಾ. [ಹೋಗುವರು.]

## ಸ್ಥಾನ ೨.

[ಜಯು ಮನೆ ಸುಸಜ್ಜಿತವಾದ ಕೋಣೆಯಲ್ಲಿ ಸುಲೋಚನೆಯೊಂದಿಗೆ ಮಾತನಾಡುತ್ತಾ ಕೂತಿರುವನು.]

**ಸುಲೋಚನೆ :** ಹೋಗಿ ಬರಲು ಎರಡು ವರ್ಷಗಳಾಗುತ್ತದೆಯೇ ?

**ಜಯು :** ಹೌದು ಹನ್ನೆರಡುಸಾವಿರ ರೂಪಾಯಿಗಳು ಬೇಕಾಗುತ್ತದೆ. ಹೊರಡುವುದೊಂದೇ ತಡ, ಎರಡು ವರ್ಷಗಳು ಎರಡೇ ನಿಮಿಷಗಳಂತೆ ಕಳೆದು ಹೋಗುತ್ತೆ. ಆಮೇಲೆ ಬಹು ಸುಖವಾಗಿರಬಹುದು.

**ಸುಲೋಚನೆ :** ಅದೆಲ್ಲವೂ ಸರಿಯೆ, ಆದರೆ ಎರಡು ವರುಷಗಳ ವರಿಗೆ ನಾನಿಲ್ಲೇನು ಮಾಡಲಿ ?

**ಜಯು :** ನಾನೇನು ಹೇಳಲಿ. ಇದುವರೆಗೆ ಹೇಗಿದ್ದೆ ?

**ಸುಲೋಚನೆ :** ಹೇಗಿರುವುದೇನು, ನನ್ನ ಪತಿಗಳಾದ ಜಮೀನ್ದಾರ್ ಸಂಜೀವರಾಯರೊಡಗೂಡಿ ಸುಖದಿಂದಿದ್ದೆ. ಆದರೆ ಆ ಸುಖವು ಶಾಶ್ವತವಾಗಿರಲಿಲ್ಲ. ದೈವವಶಾತ್ ಮನ್ನೆತಾನೇ ಕಾಲರಾದಲ್ಲಿ ಅವರು ಸ್ವರ್ಗಸ್ಥರಾದ್ದರಿಂದ ಆ ಆಸ್ತಿಯೆಲ್ಲವೂ ನನ್ನ ಕೈಸೇರಿದೆ. ಜನ್ಮಾವಧಿ ವಿಧವಾವಸ್ಥೆಗೆ ಹೆದರಿ ತಮ್ಮ 'Advertisement'ನ್ನ ನೋಡಿ ತಮ್ಮಲ್ಲಿಗೆ ಬಂದಿರುವೆನು. ನಿಮ್ಮಂಥ 'Very promising youth' ದೊರೆತುದು ನನ್ನ ಪುಣ್ಯವೇ ಸರಿ.

**ಜಯು :** ಹೌದು, ಮದುವೆ ನಾಳೆಯೇ ಆಗಿಹೋಗಲಿ.

**ಸುಲೋಚನೆ:** ಸರಿ ನಿಮಗೆಷ್ಟು ಬೇಕೋ ಅಷ್ಟು ಹಣವನ್ನು ನಾನು ಕೊಡಲು ಸಿದ್ಧಳಿದ್ದೇನೆ. ಮುಂದಿನ ತಿಂಗಳಲ್ಲಿ ಹಡಗು ಹತ್ತಲು ಏರ್ಪಾಡು ಮಾಡಿಕೊಳ್ಳಿ.

**ಜಯು:** ನಾವಿನ್ನು ಹೊರಡೋಣ. ಮುಂದಿನ ಕಾರ್ಯಗಳಿಗಿನ್ನೇನು ಯೋಚನೆ! ಎಲ್ಲವೂ ತಾನಾಗಿಯೇ ಸರಿಯಾಗುವುವು.

## ಸ್ಥಾನ ೩.

[ಸುಲೋಚನೆಯು 'Drawing-room' ನಲ್ಲಿ ಮುದುಕಿಯೊಬ್ಬಳೊಡನೆ ಮಾತಾಡುತ್ತಿರುವಳು.]

**ಮುದುಕಿ:** 'ಅಲ್ಲವಮ್ಮಾ ಇದಕ್ಕೇ ಅಲ್ಲವೇ ಸ್ತ್ರೀಯರಿಗೆ ಪಾರುಪತ್ಯ ಕೊಡಬಾರದು ಅಂತ ಸಾರೋದು. ನಮ್ಮ ಬುದ್ಧೀವ್ರ ಕಾಲಕ್ಕೆ ಹೇಗಿತ್ತೋ ನೀವೇ ನೋಡಿರಲಿಲ್ಲವೇ. ವೀಳೇದೆಲೆಗೂ ಮೂರು ಕಾಸನ್ನು ನಮ್ಮ ಜಮಾನರೇ ಕೊಟ್ಟು ತರಿಸಬೇಕಾಗಿತ್ತು. ನಮ್ಮ ಮ್ಮಣ್ಣಿಯವರಿಗೆ ಒಂದಾಣೆಗೆ ಎಷ್ಟು ಕಾಸೆಂದರೆ ತಿಳೀದು.'

**ಸುಲೋಚನೆ:** ಈಗೇನಾಯಿತು? ನನ್ನ ದುಡ್ಡೆಲ್ಲಿಯೂ ಹೋಗುವು ದಿಲ್ಲ; ವಿದ್ಯಾವಂತನಾದ ಯುವಕನಿಗೆ ಸರಿಯಾದ ಬೆಲೆ ಕೊಟ್ಟಿರುವೆನು. ಆತನಿಂದ ಅದರ ಹತ್ತರಷ್ಟು ಉಪಯೋಗವನ್ನು ಪಡೆಯುವ ಪೂರ್ಣ ಭರವಸೆ ನನಗಿದೆ. ನನಗೇನು ತಿಳಿವಳಿಕೆ ಇಲ್ಲವೇ?

**ಮುದುಕಿ:** ನಿನ್ನಿಷ್ಟಾವಮ್ಮಾ, ನಮ್ಮ ಕಾಲಕ್ಕೆ ಹೆಂಗಸರಿಗೆ ಇಷ್ಟು ಧೈರ್ಯವೂ, ಸಾಹಸವೂ, ಯುಕ್ತಿಯೂ ಇರಲಿಲ್ಲ. ಮೂಕರಂತೆ ಮನೆ ಕೆಲಸಗಳಲ್ಲಿ ದುಡಿಯುತ್ತಾ ಧಡ್ಡರಂತೆ ಗೌರಿಪೂಜೆ, ಗಂಡನಪೂಜೆ, ಆತನ ಕಣ್ಮುಂದೆಯೇ ಸಾಯಬೇಕು ಅಂತ—ಅರುಂಧತಿ, ಅನುಸೂಯ, ಸಾವಿತ್ರಿಯಂತಹ ಪತಿವ್ರತೆಯರಿಗೆ ನಿತ್ಯವೂ ನಮಸ್ಕಾರಮಾಡುತ್ತಾ ಕಾಲಕಳೆಯುತ್ತಿದ್ದರು.

**ಸುಲೋಚನೆ:** ಮತ್ತಿನ್ನೇನು 'Civilisation' ಇಲ್ಲದವರ ಗತಿಯೆಲ್ಲವೂ ಅಷ್ಟೇ! ಆಪೂಜೆ, ಈಪೂಜೆ, ಗಂಡನ ಪೂಜೆ ಅಂತ— ಯಾರೇನ ಹೇಳಿದರೂ ನಂಬಿಕೊಂಡು ಕುರಿಗಳಂತಿದ್ದರು. ಮಾಡೋಕೆ ನಾಜೂಕಾದ ಕೆಲಸಗಳು ಬಂದಿದ್ದರಲ್ಲವೇ!

**ಮುದುಕಿ:** ಹಾಗೆನ್ನಬೇಡವಮ್ಮಾ ಅವರೇ ಪುಣ್ಯವಂತರು.

**ಸುಲೋಚನೆ:** ಆದರಾಗಲಿ! ನಿನ್ನ ಕೆಲಸ ನೋಡು ಹೋಗು.

(ಹೋಗುವಳು)

[ಶ್ರೀಮತಿ ಇಂದಿರಮ್ಮನವರ ಪ್ರವೇಶ]

**ಸುಲೋಚನೆ:** ಬನ್ನಿ, ಬನ್ನಿ. ಇಂದಿರಾಬಾಯಿ. ಏನಪರೂಪ! ಬಹು ದೂರ ಬಂದಿರುವಿರಲ್ಲಾ.

**ಇಂದಿರೆ:** ನಾಳೆ ಭಾನುವಾರ, ಬಹು ಮುಖ್ಯವಾದ ಕೆಲವಂಶಗಳ ಮೇಲೆ, ಸಮಾಜದಲ್ಲಿ ಚರ್ಚೆ ನಡೆಯುವುದು. ನೀವಂತೂ ಅಗತ್ಯವಾಗಿ ಬರಬೇಕು.

**ಸುಲೋಚನೆ:** ಅಗತ್ಯವಾಗಿ ಆಗಬಹುದು. ಆದರೆ ಕಮಲಮ್ಮ, ಸುಂದರಮ್ಮ ಮುಂತಾದವರ ಗುಂಪು ನಾಳೆ ಬಂದರೆ, ನಾಬರೋದಿಲ್ಲ.

**ಇಂದಿರೆ:** ನಮ್ಮ ಸಮಾಜದ ಶಕ್ತಿಯನ್ನು ಹೆಚ್ಚಿಸಲು ನಿಮಗೆ ಉಪಾಯ ತಿಳಿಯದು. ಅಂತಹ, ಹರಟೆಮಲ್ಲಿಯರ ಕೂಗನ್ನಡಗಿಸಿದರಲ್ಲವೇ, ನಮ್ಮ ಸ್ವಾತಂತ್ರ್ಯದ ಕಾರ್ಯವು ಸುಲಭವಾಗಿ ಫಲಿಸುವುದು.

**ಸುಲೋಚನೆ:** ಕಮಲಮ್ಮನವರು ಬಹಳ ಓದಿದ್ದಾರೆ. ಶಾಸ್ತ್ರಗಳ ಆಧಾರದ ಮೇಲೇ ಮಾತನಾಡುತ್ತಾರೆ. ಇಂಥವರ ಬಾಯಿಮುಚ್ಚಲು ಹೇಗೆ ಸಾಧ್ಯ? [ಯೋಚಿಸಿ] ನಮ್ಮ ಕಡೆ ಮಾತನಾಡುವವರ ಸಂಖ್ಯೆ ಹೆಚ್ಚಾಗಿರುವುದರಿಂದ ಇಂಥವರೆಷ್ಟು ಜನವಿದ್ದರೂ ಬರೀ ಮಾತಿನಿಂದಲೇ ನಿಶ್ಶಕ್ತರನ್ನಾಗಿ ಮಾಡಿಬಿಡಬಹುದು.

**ಇಂದಿರೆ:** ನಾನೂ ಈ ವಿಚಾರವಾಗಿ ಬಹಳ ಜನರನ್ನು ಪ್ರಶ್ನೆಮಾಡಿ ಕೆಲವು 'points' ಗುರ್ತುಹಾಕಿಕೊಂಡಿರುತ್ತೇನೆ. ಅವರಿಗೆ ಮಾತನಾಡಲು ಹೆಚ್ಚು ಆಸ್ಪದ ಕೊಡದೆ 'President's arbitrary powers' ಇವೆಯಲ್ಲಾ ಚಲಾಯಿಸಿದರಾಯಿತು. ನಿಮ್ಮ ಕಡೆಯುವರು ಕಾಲವನ್ನೆಲ್ಲಾ ಆಕ್ರಮಿಸಿಕೊಂಡು ಏನನ್ನಾದರೂ ಮಾತನಾಡುತ್ತಿರಿ.

**ಸುಲೋಚನೆ:** ಮುದುಕಿ! ಕಾಫಿ ತೆಗೆದುಕೊಂಡು ಬಾ.

**ಇಂದಿರೆ:** [ಕುಡಿದು] Thank you—ನಾನು ಹೋಗಬೇಕು. ಸ್ಕೂಲೊಂದು ನನ್ನ ತಲೆಗೆ ಕಟ್ಟಿದ್ದಾರೆ. ಅದೊಂದು ಜವಾಬ್ದಾರಿ ಕೆಲಸ. ಹೋಗಿ ಬರುವೆನು. [ಹೊರಟು ಹೋಗುವಳು]

### ಸ್ಥಾನ ೪

[ಇಂದಿರಮ್ಮನ ಸ್ಕೂಲು, ಜವಾನ್ ಮಸ್ತಾನ್ ಸಾಹೇಬರು ಶೀವಿಯಿಂದ ದವಾಲಿಯೊಂದಿಗೆ ನಿಂತು]

**ಮಸ್ತಾನ್:** ನನ್ಗೆ! ಕನಡ್ ಬರೊಕಿಲ್ಲಾ! ನನಗೇ ತೆಲಗ್ ತೆಳೋಕಿಲ್ಲಾ-ಶೆಂದಾಗಿದ್ದಾದಲ್ಲಾ! ನಮ್ದೂ- ಕೆಲ್ಸ- ಬಹು ಕಷ್ಟ. ಮೇಸ್ತ್ರಿ ಹೈನಾ-ಕ್ಯಾಕ್ಯಾಕೀ-ಬೋಲ್ತಾದೆ. ನಮ್ಗೂ ಕೆ-ಒಂದೂ- ತೆಳೋಕಿಲ್ಲ. ಬೈತಾದೋ? ಕ್ಯಾಕೀ- ಒದ್ದಪ್ಪಾ- ಒದ್ದು; ಮೇಸ್ತ್ರಿಕೂ - ಕಾಂಕರ್ನ್ನೆ-ಹೋತಾನ್ಸೈ.

(ಇಂದಿರಮ್ಮನು ಕೆಲವು ಪುಸ್ತಕಗಳನ್ನು ಹಿಡಿದು ಬರುವಳು)

**ಇಂದಿರೆ:** (ಬೇಸರಿಕೆಯಿಂದ) ಥೂ- ಈ ಹಾಳು ಸ್ಕೂಲಿಗೇಕೆ ನನ್ನನ್ನು ಕಳುಹಿಸಿದರೋ ಕಾಣೆ. ಜವಾನ ತುರುಕ, ಹುಡುಗರಂತೂ ತೆಲಗೂ, ಅರ್ವ, ತುಳು, ಗುಜರಾತಿ, ನಾನಾ ಭಾಷೆಗಳನ್ನೆಲ್ಲಾ ಕಲಸಿ ಮಾತನಾಡುತ್ತಾರೆ. ಈ ಮದ್ದುಮುಂಡೇದಿದೆಯಲ್ಲಾ (ಒಬ್ಬನ ಕಿವಿ ಹಿಡಿದೆಳೆದು) ಎಂಟು ದಿನದಿಂದ 'ಎಲೆ ಚಿಕ್ಕೆ' ಹೇಳ್ಕೊಟ್ಟು ಹೇಳ್ಕೊಟ್ಟು ನನ್ಗಂ

ಟಲೇ ಒಡೆದ್ಹೋಯಿತು. ಇವನಿಗಂತೂ ಬರೊಲ್ಲ. ನಾಳೆ ಇನ್ಸ್‌ಪೆಕ್ಟ ರವರು ಬಂದು ಇವನಿಗೆ ಪ್ರಶ್ನೆ ಮಾಡಿದರೆ ನನ್ನ ಗತಿ ಜೇಡ. ಬಹಳ ಕಷ್ಟಾ ಇದೆ. [ಮೆಲ್ಲನೆ]ನಾನು ಹೆಂಗಸು, ಇವರನ್ನು ಹದ್ದಿನಲ್ಲಿಡೋ ಕಾಗೋದಿಲ್ಲ; ಏನು ಮಾಡೋದು!

[ಜವಾನನಕಡೆ ತಿರುಗುತ್ತ] 'ಪಾಠ ಹೇಳಿರೋ........'

**ಮುಸ್ತಾಕ್:** ನಮ್ಗೂಕೆ ಕೇಳ್ತಾದೊ ಏನೋ [ಎನ್ನುತ್ತಾ] ಬೆಕ್ಕೆಕ್ಕೇ-ಎಲೆ-ಎಲೇ-ಸಿಂದೂ-ರೂಪಾ-ಆ-ನಿಂದಲೀ-ಹುಲೀ-ಈ-ಕೇ-ಜಾತ್ಕು-ಸಸ್ದು-ಸೇರಿ-ಇಧಾದೇ-ಅಂತಾ ಗರ್ವಬೇಡಾ........''

**ಇಂದಿರೆ:** 'ಸುಮ್ಮನೆ ಬಾಯಿ ಮುಚ್ಚೊ.'

[ಶ್ರೀನಿವಾಸನ ಪ್ರವೇಶ]

**ಶ್ರೀನಿವಾಸ:** [ಸ್ವಗತ]ನನ್ಗತೀ ಹೇಳ್ಕೋಬೇಕೇ? ಇವರು [ಇಂದಿರೆಯ ಕಡೆ ತೋರಿಸುತ್ತಾ] ನಮ್ಮೆ ಜಮಾನ್ರು. ಈರುಳ್ಳಿ-ಹುಳಿ ಮಾಡು ಅಂತ ಹೇಳಿ, ಬಂದ್ಬಿಟ್ರು ಕಾಸು ಕೊಡದಿದ್ರೆ ಯಾರು? ಇವಳಪ್ಪ ಕೊಡೋದು?—ಅಲ್ಲ! ಒಳ್ಳೆ ಗ್ರಹಚಾರ ಬಂತಪ್ಪಾ. ಪೂರ್ವಕಾಲಕ್ಕೆ-ಗಂಡಸರೇ ಸಂಪಾದಿಸುತ್ತಿದ್ದರಂತೆ! ಅವರ ಕೈಲೇ ದುಡ್ಡು ಅನ್ನೋದು ಓಡಾಡ್ತಿತ್ತಂತೆ!! ಈಗ ಇವಳ್ನ ಮೂರು ಕಾಸು ಕೇಳೋಕ್ಕೆ ಅಲ್ಲಿಂದಾ ಬಂದಿದ್ದಾಯಿತು. 'ಪೂರ್ವಜನ್ಮದ ಸುಕೃತ.'

**ಮುಸ್ತಾಕ್:** 'ಸಾರು' ಯಾರೋ ಬಂದ್ರೈತೆ.

**ಇಂದಿರೆ:** [ಬಲು ಸಿಟ್ಟಿನಿಂದ] ಯಾತಕ್ಕೆ ಬಂದದ್ದು?

**ಶ್ರೀನಿವಾಸ:** ಈರುಳ್ಳಿ ತರೋಕೆ—ದುಡ್ಡು.

**ಇಂದಿರೆ:** ಮನ್ನೆ ಮೊಸರಿನವಗೆ ಕೊಟ್ಟು ಮಿಕ್ಕ ಒಂದು ದುಡ್ಡು ಏನಾಯಿತು?

**ಶ್ರೀನಿವಾಸ:** 'ನ....ಸ್ಯ....'

**ಇಂದಿರೆ:** ಹಾಳು ಕೈಲಾಗದ ಬಾಳಿಗಿಷ್ಟು ಬಿಂಕೀ ಹಾಕಿತು; ನಶ್ಯಕ್ಕೂ ನಾನೇ ಕಾಸು ಕೊಡಬೇಕೇ? [ಮೂರ್ಕಾಸು ಬಿಸಾಕಿ] ಅಡಿಗೆ ಚೆನ್ನಾಗಿರಲಿ—

**ಮಸ್ತಾನ್:** ಪಾಪ! ಅಯ್ನೋರಿಗೆ ಘರ‍್ಕಾಕಾಂ, ಅಮ್ನೋರ‍್ಗೆ !-ಹೊರ‍್ಗಿಂದು ಕಾಂ—ಚೆನ್ನಾಗಿಧಾದೆ ಪಪಂಚ. ಏನು ಳ್ಕಾಸೀದಾ ಅಗ್ಬಿಟ್ಟೈತಪ್ಪಾ! ಪಾಪ—ಇನ್ನೂ ನಮ್ದೂಕೆ ಬಳ್ಗೆಳು ತೊಡಿಸಲಿಲ್ಲವಲ್ಲಾ ಅಂತ ಅಲ್ಲಾಗೆ ಸಲಾಂ ಮಾಡ್ಬೇಕು, [ಶ್ರೀನಿವಾಸನ ಕಡೆಗೆ ತಿರುಗಿ]

ಹುಂ! ಜಾವ್ !! ಜಾವ್ !!!

[ಘಂಟೆ ಹೊಡೆಯುವನು—ಎಲ್ಲರೂ ಓಡುವರು.]

## ಸ್ಥಾನ—೫.

[ಸ್ತ್ರೀ ಸಮಾಜ—ಕೆಲವರು ಸ್ತ್ರೀಯರೂ, (President) ಇಂದಿರಾಬಾಯಿ, ಸುಲೋಚನೆ, ಚಂಚಲೆ, ಮಧುರವಾಣಿ ಸುಮಿತ್ರ ಇವರೂ, ಎಡಗಡೆ ಸುಂದರಮ್ಮ, ಕಮಲಮ್ಮನವರೂ ಕುಳಿತಿರುವರು.]

**ಇಂದಿರೆ:** [ಎದ್ದುನಿಂತು] ನಾವು ನೆರೆದಿರುವ ಉದ್ದೇಶವು ನಿಮಗೆಲ್ಲರಿಗೂ ತಿಳಿದೇ ಇದೆ. ಇಂದಿನ ನಮ್ಮ ಸ್ಥಿತಿಯನ್ನು ಹೇಳಲು ಬಹು ವಿಷಾದ ವಾಗುವುದು. ನಮ್ಮ ಸಮಾಜವು ನವೀನ ಪದ್ಧತಿಗಳನ್ನನುಸರಿಸಿ ಪಾಶ್ಚಿಮಾತ್ಯ ಸ್ತ್ರೀಯರಂತೆ ಉತ್ತಮರಾಗುವಂತಿಲ್ಲ. ಅಮೇರಿಕದಲ್ಲಿ, ಇಪ್ಪತ್ತುವರುಷಗಳವಧಿಯಲ್ಲಿ ಪ್ರತಿಯೊಬ್ಬ ಸ್ತ್ರೀಯಳೂ ವಿದ್ಯೆಯಲ್ಲಿಯೂ, ನಾಗರೀಕತೆಯಲ್ಲಿಯೂ ತಮ್ಮ ಪುರುಷರನ್ನು ಮೀರಿಸಿ ಯುಕ್ತಿಯಿಂದವ ರನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿರುತ್ತಾಳೆ. ಆ ದೇಶದ ಇಂದಿನ ಉನ್ನತಿಗೂ, ಸಂಪತ್ತಿಗೂ ಅವರೇ ಕಾರಣರು. ನಮ್ಮ ಸ್ತ್ರೀಯರೂ ಕೂಡ, ಇದೇರೀತಿ ಮುಂದುವರಿಯಲು ಮನಸಾ ಪ್ರಯತ್ನಿಸಿದರೆ ಲೋಕಕ್ಕೇ ಕ್ಷೇಮವುಂಟಾಗುವದು.

ಸ್ತ್ರೀ ಸಮಾಜಗಳನ್ನು ಸ್ಥಾಪಿಸಿ, ಅವುಗಳಲ್ಲಿ ಸ್ತ್ರೀಯರು ಪುರುಷರನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳಲು ಉಪಾಯಗಳನ್ನೂ ಮತ್ತು ಅದರಿಂದ ಲಭಿಸುವ ಪ್ರಯೋಜನಗಳನ್ನೂ ಅರಿಯದವರಿಗೆ ಬೋಧಿಸಬೇಕು. ಸ್ತ್ರೀಯರಿಂದಲೇ ನಮ್ಮ ದೇಶದೇಳಿಗೆಯಾಗಬೇಕು. ಸ್ತ್ರೀ ಪ್ರಪಂಚವಾಗಬೇಕು.

**ಮಧುರವಾಣಿ :** ಪುರುಷರನ್ನು ಜಯಿಸಬೇಕಾದರೆ ಯಾವರೀತಿಯಲ್ಲಿ ಪ್ರಯತ್ನಿಸಬೇಕು? ಗಂಡಸರಿಗೆ ನೀತಿ ಹೇಳುವುದು ಹೇಗೆ? ಅಬಲೆಯರೆಂದು-ಕೋಣೆಯಲ್ಲಿ ಕೂಡಿ, ಹೊಡೆದು, ಕಣ್ಣೀನ ದಿಗಿಲಿನಿಂದ ಆಳುತ್ತಿರುವ, ಆ ರಾಕ್ಷಸ ವರ್ಗವನ್ನು ಹೆದರಿಸಲು ಹೇಗೆ ಸಾಧ್ಯ?

**ಇಂದಿರೆ :** ಈ ಪ್ರಶ್ನೆಗಳಿಗೆ ಎಲ್ಲರೂ ಅವರವರ ಅಭಿಪ್ರಾಯಗಳನ್ನು ಸಭೆಗೆ ಸೂಚಿಸಬಹುದು.

**ಸುಂದರಮ್ಮ :** "ನವೀನ ಪದ್ಧತಿಗಳನ್ನನುಸರಿಸಿ ನಾವೂ ಪಾಶ್ಚಿಮಾತ್ಯ ಸ್ತ್ರೀಯರಂತೆ—ಕೇಶಗಳನ್ನು ಕತ್ತರಿಸಿಕೊಂಡು, ಲಂಗ, ಫೇಸ್ ಪೌಡರ್ (Face powder) ಗಳನ್ನಚ್ಚಿಕೊಂಡು ಮೆರೆಯಬೇಕೇ? ಅವುಗಳವಶ್ಯಕತೆಯೇನು? ಧನಾರ್ಜನೆಯೇ ಸ್ತ್ರೀಯರಿಗೆ ಮುಖ್ಯವಲ್ಲ. ಸಮಾಜದ ಉನ್ನತಿಗೆ ನೀವು ಮಾಡತಕ್ಕುದಾವುದೂ ಸರಿಯಲ್ಲ. ಸಾಮಾನ್ಯವಾಗಿ ಪಾಶ್ಚಿಮಾತ್ಯರಿಗೆ ಮನೆಮಂದಿ ಮಕ್ಕಳೆಲ್ಲರೂ ದುಡಿದರೂ ವಾರಕ್ಕೆ ಬರುವ ಕೂಲಿಯು ಹೊಟ್ಟೆಕೂಡಾ ತುಂಬುವಷ್ಟಿರಲಿಲ್ಲ. ಆದ್ದರಿಂದ ಸಂಸಾರದ ಪ್ರತಿಯೊಬ್ಬರೂ ಹೊಟ್ಟೆಪಾಡಿಗೆ ಯಾವ ವಿದ್ಯೆಯನ್ನಾದರೂ ಕಲಿಯಬೇಕಾಗಿತ್ತು.

ಆದರೆ ನಮ್ಮ ಜನ್ಮ ಭೂಮಿಯು, ತನ್ನ ಮಕ್ಕಳನ್ನು ತಿರಿದುಣ್ಣುವಂತೆ ಮಾಡಿದೆ—ಒಬ್ಬ, ಆಳು ದುಡಿದರೂ, ಒಂದು ಸಂಸಾರವು ಸಂತುಷ್ಟಿಯಾಗುವಷ್ಟು, ಬೆಳೆಯುವುದು. ಇಂತಹ ಸ್ಥಿತಿಯಲ್ಲಿ ಆ ದುಡಿಯುವವನೊಬ್ಬನ ಸೌಖ್ಯವನ್ನೇ ಚಿಂತಿಸಿ, ಆತನನ್ನು ತೃಪ್ತಿ

ಗೊಳಿಸಿದರೆ ಸರ್ವವಿದ್ಯೆಕಲಿತುದರ ಫಲ. ವಿದ್ಯೆಯಿಂದ ನಾವು ನಮ್ಮ ಜಮಾನರಿಗೆ ಸಂಪಾದಿಸಿ ಹಾಕಬೇಕಾದವಶ್ಯಕತೆಯಿಲ್ಲ. ಇದಕ್ಕಿಂತಲೂ ಸಮಾಜಸೇವೆಗೆ ಉನ್ನತ ಹಾದಿಯು ಇನ್ನಿಲ್ಲ.

**ಇಂದಿರೆ**: ನಿಮ್ಮ ಧ್ಯೇಯಗಳು ನಮಗೆ ಸಮ್ಮತವಿಲ್ಲ. ನಿಮಗೆ ನ್ಯಾಯವೆಂದು ಕಾಣುವ ವಿಚಾರವು ಇಲ್ಲಿನ ಬಹು ಜನರಿಗೆ ಸರಿತೋರುವುದಿಲ್ಲ. [ಸಭೆಯಕಡೆ ತಿರುಗಿ] ಎಷ್ಟು ಜನರಿಗೆ ಸುಂದರಮ್ಮನವರು ಹೇಳಿದ ವಿಚಾರವು ಸಮ್ಮತವಿದೆ? ಕೈಯೆತ್ತಿ [For 2 ; against 5.] 'Lost'....

**ಚಂಚಲೆ**: ಮೊದಲಿಂದಲೂ ಹುಡುಗಿಯರಿಗೆ 'physical education' ಕೊಡಿಸಬೇಕು. ಇದರಿಂದ ಶಕ್ತಿವಂತರಾದ ಹೆಂಡತಿಯರು ಅವರ ಪೊಳ್ಳುದಿಗುಲಿಗಂಜರು.

**ಮಧುರವಾಣಿ**: I Second it.

**ಕಮಲಮ್ಮ**: ಪುರುಷರನ್ನೇಕೆ ಜಯಿಸಬೇಕು? ಅವರೇನು ನಮಗೆ ಶತ್ರುಗಳೇ? ಮನೆಯಲ್ಲಿ ಅವರೊಂದಿಗಿರಬೇಕು. ನಿಮಗೆ ದಿಗಿಲು ಭಯಗಳುಂಟಾದ ವೇಳೆಯಲ್ಲಿ ಅವರ ಸಹಾಯ ಬೇಕು. ಪ್ರತಿಯೊಂದು ಕೆಲಸವೂ ಅವರಿಂದ ನಮಗಾಗಬೇಕು. ನೀವು ಅವರನ್ನು ಜಯಿಸಿ ಅವರನ್ನು ಬಿಟ್ಟು ಬೇರೆ ಜೀವಿಸಬಲ್ಲ ಶಕ್ತಿಯಿದ್ದರೆ ಹೇಳಿ, ಈ ದಿನವೇ ನಾವೆಲ್ಲರೂ ಸೇನೆ ಕಟ್ಟಿ, ಅವರನ್ನು ಸಮುದ್ರಕ್ಕೆ ನೂಕಿಬಿಡೋಣ!

**ಸುಲೋಚನೆ**: ಅಮ್ಮಾ ಕಮಲಮ್ಮನವರೇ—ನೀವಾಡುವ ಮಾತುಗಳೆಲ್ಲಾ, ನಿಮಗೆ ಇಂದಿನ ಸ್ತ್ರೀ ಸಮಾಜದ ಸ್ಥಿತಿಗಳು ತಿಳಿಯದೇ ಈ ರೀತಿಯೆಲ್ಲಾ ಅಜ್ಞಾನದಿಂದ ಹೇಳುತ್ತಿರುವಿರಿ. ನೀವಂತೂ ವಿದ್ಯಾವಂತರು. ನಿಮ್ಮ ಜಮಾನರು ನಿಮ್ಮನ್ನು ಗೌರವದಿಂದ ಕಾಣಬಹುದು. ಆದರೆ ನೂರಕ್ಕೆ ತೊಂಬತ್ತು ಜನರ ಪಾಡು ನಿಮಗೆ ತಿಳಿಯದು. ನಾವು ಮಾಡುತ್ತಿರುವುದು ನಮ್ಮೊಬ್ಬರಮಾತಿಗಲ್ಲ ಇಡೀ ಸ್ತ್ರೀ ಸಾಮ್ರಾಜ್ಯಕ್ಕೇ ಸುಖಶಾಂತಿಗಳುಂಟಾಗಲು ಈ ಜೀವವನ್ನೇ ತೆರಲು ಸಿದ್ಧವಾಗಿದ್ದೇವೆ........

**ಸುಂದರಮ್ಮ** : ಜೀವಹೋಗುವ ಸ್ಥಿತಿಯಿನ್ನೂ ಬಂದಿಲ್ಲಾ. ಪುರುಷರ ಪ್ರೇಮಕ್ಕೆ ಪಾತ್ರರಾಗಲು ಸಾಧಕಗಳು ನಿಮಗೆ ಗೊತ್ತಿಲ್ಲ. ಸ್ತ್ರೀಯರು ವಿದ್ಯೆ ಕಲಿಯಬೇಕೆನ್ನುವಿರಲ್ಲಾ ; ಯಾವ ವಿದ್ಯೆಗಳು ಇದಕ್ಕೆ ಸಾಧಕಗಳು ? ಸ್ತ್ರೀಯು ಸಂಗೀತ ಶಾಸ್ತ್ರದಲ್ಲಿ ಪಂಡಿತಳಾಗಿ ಗಂಧರ್ವ ಸ್ತ್ರೀಯಂತೆ ಲಲಿತವಾಗಿ ಹಾಡತಕ್ಕ ಕಂಠವುಳ್ಳವಳಾಗಿದ್ದರೆ, ಆಕೆಯು ಆ ಸಂಪತ್ತಿನಿಂದ ದ್ರವ್ಯಾರ್ಜನೆಗೆ ಹೋಗಬೇಕಾದುದಿಲ್ಲ. ತನ್ನ ಪತಿಗೆ ಮನಶ್ಶಾಂತಿಯನ್ನುಂಟುಮಾಡಿ, ಸಂಸಾರ ಸಾಗರದಲ್ಲಿನ ಅಮೂಲ್ಯವಾದ ಮುತ್ತಿನ ಗಣಿಗಳನ್ನು ಹುಡುಕಿಕೊಟ್ಟು ಆತನ ಉದಾರ ಪ್ರೀತಿಯನ್ನು ಸಂಪಾದಿಸುವುದಕ್ಕಿಂತ ಹೆಚ್ಚಿನದ್ಯಾವುದು ?

**ಸುಲೋಚನೆ**: ಅವರ ಪ್ರೀತಿ ಸಂಪಾದಿಸಲು ಕೈ ಒಡ್ಡಿಕೊಂಡು ನಾವೇಕೆ ಅವರ ಪಾದಗಳ ಬಳಿ ನಿಂತಿರಬೇಕು ? ನಮಗೆ ಸ್ವಾತಂತ್ರ್ಯ ದೊರೆತರೆ, ನಮಗೆ ಸರಿಸಮಾನರಾಗಿ ನಡೆಯುವಂತೆ ಮಾಡಬಹುದು.

**ಇಂದಿರಮ್ಮ** : "ದಯವಿಟ್ಟು ಶಾಂತಚಿತ್ತದಿಂದ ಮುಂದಿನ ಕಾರ್ಯ ಭಾಗವನ್ನು ಕೇಳಿ ತಿಳಿಯಿರಿ"

**ಚಂಚಲೆ** : "ಪುರುಷರಿಗೆ- ಬೇಕಾದರೆ- ಒಂದೇ ಮದುವೆಗೆ ಅರ್ಹತೆಯನ್ನು ಕೊಡಬೇಕು. ಇದರಿಂದ ಸ್ತ್ರಿಯರಿಗೆ ಗೌರವವೂ, ಬೆಲೆಯೂ ಹೆಚ್ಚುವುದು"

**ಸುಮಿತ್ರೆ** : I second it emphatically

**ಸುಲೋಚನೆ** : ಬೆಳಗಿನಿಂದ ಸಂಜೆಯವರೆಗೆ ದುಡಿದರೂ ಅವರ ಮನಸ್ಸಿಗೆ ತೃಪ್ತಿಯಿರುವುದಿಲ್ಲ, ಆದ್ದರಿಂದ ಈ ಕೆಲಸಗಳ ಕಷ್ಟವನ್ನು ಅವರಿಗೆ ಅನುಭವವಾಗುವಂತೆ ಮಾಡಲು ಎಲ್ಲಾ ಮನೆ ಕೆಲಸಗಳನ್ನೂ ಅವರಿಗೇ ಒಪ್ಪಿಸಬೇಕು.

**ಮಧುರವಾಣಿ** : ಇಷ್ಟೇ ಅಲ್ಲದೆ, ನಮಗೆ ಸಮಾಜಸೇವೆ ಮಾಡಲು ಈ ಕೆಲಸಗಳಿಂದ 'Relief' ಬೇಕು. ಭಾರತದ ಬಡತನ ಮತ್ತು ಬಂಧ

ನವನ್ನು ನೀಗಿಸಲು ಸ್ತ್ರೀಯರಿಂದಲೇ ಸಾಧ್ಯವು. ಆದ್ದರಿಂದ ಸ್ತ್ರೀಯರಿಗೆ ಸಂಪೂರ್ಣ ಸ್ವಾತಂತ್ರ್ಯ ಬೇಕು. (Vehemently Supported by all)

**ಸುಂದರಮ್ಮ**: ಭಾರತದ ಬಡತನ ನೀಗಲು ನಿಮಗೆ ಯಾವ ಸ್ವಾತಂತ್ರ್ಯ ಬೇಕು? ಈಗಿರುವ ಬಂಧನವಾದರೂ ಯಾವುದು? ನಿಜವಾಗಿಯೂ ದೇಶೋದ್ಧಾರ ಮಾಡುವವರಿದ್ದರೆ ಯೆಲ್ಲರೂ ಮಹಾತ್ಮರುಪದೇಶವನ್ನನುಸರಿಸಿರಿ. ಚರಕವಾಡಿ-ಬಟ್ಟೆ ನೇಯಿರಿ. ಬಡಬಗ್ಗರಿಗೆ ದಾನಮಾಡಿ; ಪರದೇಶ ವಸ್ತುಗಳನ್ನು ಬಹಿಷ್ಕರಿಸಿ.

**ಕಮಲಮ್ಮ**: ಶ್ರಮಪಟ್ಟು ದುಡಿದು ತಂದ ಹಣವನ್ನು ಹೆಂಡ, ಸಾರಾಯಿಗಳಿಗೆ ಹಾಳುಮಾಡುತ್ತ-ದೇವರು ಸುಖಿಸಲು ದೇಹಧಾರ್ಢ್ಯ ಕರುಣಿಸಿದ್ದರೂ ಅದನ್ನು ನಾಶಮಾಡಿಕೊಂಡು, ತಮ್ಮ ಸಂಸಾರವನ್ನೇ ನರಕಪ್ರಾಯವಾಗಿ ಮಾಡಿಕೊಳ್ಳುತ್ತಿರುವವರಿಗೆ- ಜ್ಞಾನ ಬರುವಂತೆ ಬೋಧಿಸಿ-ಅವರು ಪಾನನಿರೋಧಿಸುವಂತೆ ಕಟ್ಟುಮಾಡಿ-ದೇಶಸೇವೆಯನ್ನು ಮಾಡಲು ಇದು ಹಾದಿಯಲ್ಲವೇ? ಇದರಿಂದ, ಬಡತನವು ನೀಗುವುದಿಲ್ಲವೇ?

**ಇಂದಿರೆ**: ತಾವುಗಳು ದೊಡ್ಡ ಮನಸ್ಸುಮಾಡಿ ಸುಮ್ಮನೆ ಕೂತು ನಾವು ಮಾಡುವುದನ್ನು ನೋಡುತಿದ್ದರೆ ಬಹು ಸಹಾಯ ಮಾಡುವಿರಿ.

**ಸುಂದರಮ್ಮ**: ನಿಮ್ಮಲ್ಲಿ ಯಾರೂ ವಿದ್ಯಾವಂತರಾಗಲಿ, ಅನುಭವಶಾಲಿಗಳಾಗಲಿ ಇಲ್ಲದುದರಿಂದ ಸ್ವಾತಂತ್ರ್ಯವೆಂಬುದಕ್ಕೆ ಸರಿಯಾದ ತಿಳಿವಳಿಕೆ ಬಂದಿಲ್ಲ, ನಿಮಗೆ ನಾವು ಹೇಳಿದರೂ ನೀತಿಯುಂಟಾಗಲಾರದು. ಸ್ವಂತ ಅನುಭವವಾಗಬೇಕು! ನಾವೇಕೆ ಮಾತನಾಡೋಣ? ನೀವು ಹೋಗುತ್ತಿರುವ ದಾರಿಯಲ್ಲಿ ತುಂಬಾ ಮುಳ್ಳುಗಿಡಗಳಿರುವುದರಿಂದ ಬಹು ಜನರು ನಡೆದು ನಡೆದು ಬಿದ್ದಿರುವ ಜಾಡನ್ನೇ ಹುಡುಕಿಕೊಂಡು ಬರುವಿರಿ. ಆದರೆ ಈಗ ಎಚ್ಚರಗೊಳ್ಳದಿದ್ದರೆ ಬಹು ದೂರ ಹೋದಮೇಲೆ

ನಡೆದುಹೋದ ದಾರಿಯು ಭೇದಿಸಲಸಾಧ್ಯವಾದ ಪೊದೆಗಳಿಂದ ಬೆಳೆದು, ಮುಂದೆ ಹೋಗಲು ಕಾಣದೆ ಹಿಂದಿರುಗಲು ಮಾರ್ಗವಿಲ್ಲದೆ ಪೇಚಾಡ ಬೇಕಾಗುವುದು. ಎಚ್ಚರಿಕೆ........

**ಇಂದಿರೆ** : ನಮ್ಮ ಕಾರ್ಯಗಳು ಫಲಿಸದಾಗ ಆ ಮಾತುಗಳಾಡಿ. ಈಗ ಸುಮ್ಮನಿರಿ.

**ಸುಂದರಮ್ಮ** : ನಮ್ಮ ಮಾತುಗಳಿಗೆ ಲಕ್ಷ್ಯಕೊಡದೆ ಸುಮ್ಮನೇ ಕೂಡಿ ಯೆಂದು ಅಪಮಾನದ ಮಾತುಗಳಾಡುವಿರಾ? ನೋಡೋಣ! ನೀವುಗಳು ಹತ್ತುಜನರಿದ್ದರೂ ನ್ಯಾಯದಿಂದ ಮಾತಾಡುವ ಒಬ್ಬಳಿಗೆ ಸಮರಲ್ಲ. ನೀವು ಮಾಡುವುದಾದರೂ ನೋಡುವ. ನಿಮ್ಮ ಕಾರ್ಯ ಕಲಾಪಗಳಲ್ಲಿ ನಮಗೆ ಬೇಸರಿಕೆಯಾಗಿದೆ. ನಾವು ಹೋಗುವೆವು.

[ಸುಂದರಮ್ಮನವರೂ ಕಮಲಮ್ಮನವರೂ ಹೊರಟು ಹೋಗುವರು.]

**ಚಂಚಲೆ** : ನಾವು ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕು. ಅಪ್ಪನ ಆಸ್ತಿ ಯಲ್ಲಿ ಹೆಣ್ಣುಮಕ್ಕಳಿಗೆ ಸಂಪೂರ್ಣ ಹಕ್ಕು ಕೊಟ್ಟುಬಿಡಬೇಕು. ನ್ಯಾಯಸ್ಥಾನಗಳಲ್ಲಿಯೂ ಮತ್ತು ಎಲ್ಲಾ ಕಡೆಗಳಲ್ಲಿಯೂ ನಮಗೆ 'front seats reserve' ಮಾಡಿಸಿರಬೇಕು.

**ಇಂದಿರೆ** : ಈ ಸೂಚನೆಗಳೆಲ್ಲವೂ ಜಾರಿಗೆ ತರುವುದರಿಂದ ಸ್ವಾತಂತ್ರ್ಯ ಸ್ಥಾಪಿಸುವೆವು. ಎಲ್ಲರೂ ಒಂದೇ ಮನಸ್ಸಿನಿಂದ ಈ ಕಾರ್ಯಗಳನ್ನು ಕೈಕೊಳ್ಳಬೇಕು. ನಮ್ಮ ಸ್ವಾತಂತ್ರ್ಯ ಸಮರದಲ್ಲಿ ನಾವು ಯಾರಿಗೂ ಭಯಪಡಬೇಕಾದುದಿಲ್ಲ.

**ಎಲ್ಲರೂ** : ಸರ್ವಸಮ್ಮತವು...........

**ಇಂದಿರೆ** : ಮುಂದೆ ಇನ್ನೂ ಇದೇ ತರಹ ಮೀಟಿಂಗ್‌ಗಳು ನಡೆಯುತ್ತೆ. ತಾವೆಲ್ಲರೂ ಶ್ರಮತೆಗೆದುಕೊಂಡು ಬಂದೇ ತೀರಬೇಕು. ಮುಖ್ಯ ಸುಲೋಚನಮ್ಮನವರು ಬಂದುದೇ ವಿಶೇಷ.

[ಎಲ್ಲರೂ ಹೋಗುವರು]

---

# ಅಂಕ ೨.

## ಸ್ಥಾನ ೧.

[ಬಲಗಡೆಯಿಂದ ಸುಂದರಾಬಾಯಿಯವರ ಗಂಡ ತಕಲಿಮಾಡುತ್ತ

**೧. ರಾಗ ಪೂರ್ವ ಕಲ್ಯಾಣಿ-ಆದಿತಾಳ**

ದೇಶವ ಸೇವಿಸುವೇ | ಬಡತನ ಕಾಟವ ನೀಗಿಸುವೇ || ಪ ||

ಚರಕಮಾಡಿ ನಾ ಕಾಲವ ಕಳೆಯದೆ |
ದಾರ ನೂಲಿನಾ ದಾಸಮಾಳ್ಪನದ || ೧ ||

ಆಳುತನದ ದುರ್ಮಾನವದರೊಳಿಲ್ಲ | ಇಳೆಯೊಳ್ |
ಆಳುವನಿಂಸನ್ಮಾನಿತವಹುದೀಗ |
ಮಾನದಿ ಗಾಂಧಿಯಾ ಧ್ಯಾನವ ಮಾಡುತೆ |
ಸೂತಧಾರವ ನಾ ಮಾರಿ ಜೀವಿಸುವೆ |

ಎಂದು ಹಾಡುತ್ತ ಬರುವನು.—ಎಡದಿಂದ ಇಂದಿರಾಬಾಯಿಯ ಗಂಡ ಬಂದು ಆತನ ಜೊತೆಯಲ್ಲಿ ನಿಂತು.]

**ಶ್ರೀನಿವಾಸ:** "ಸ್ವಾಮಿಾ, ಗೋವಿಂದರಾಯರೆ! ನಿಮ್ಮ ಸಂಸಾರದ ಸಮಾನವಿನ್ನಿಲ್ಲಾರೀ! ನೋಡಿ! ನಮ್ಮ ಯಜಮಾನೀಯವರು ೮ ಘಂಟೆಗೆ ಮನೆಬಿಟ್ಟವರು ಇಷ್ಟು ಹೊತ್ತಾದರೂ ದಯಮಾಡಲಿಲ್ಲ. ನನ್ನ ಸುಖವಂತೂ ಕೇಳಬೇಡಿ. ಅಡಿಗೆ ಮಾಡಿ ಕಾದುಕೊಂಡು ನಿಂತಿದೇನೆ. ಈಗ ಅದರಲ್ಲೂ ಸಮಾಜದ 'Presidentship' ಬಂದಮೇಲಂತೂ ಮನೆಗೆ ಸೇರುವುದೇ ಕಷ್ಟ.

**ಗೋವಿಂದರಾವ್:** ನೀವೂ ನಿಮ್ಮವರ ಜೊತೆಯಲ್ಲಿ ಸೇರಿ, ಸಮಾಜ ಸುಧಾರಣೆಮಾಡಿ. ಅವರ ಗೆಳೆಯರೆಲ್ಲರೂ ನಿಮ್ಮಕಡೆ ಬರುವರು, ಆಗ ಎಲ್ಲವೂ ಸರಿಹೋಗುತ್ತೆ!

**ಶ್ರೀನಿವಾಸ**: ನಾನೂ ಅಲೆಯಲಿಕ್ಕೆ ಮೊದಲುಮಾಡಿದರೆ ಮನೇಲಿ ಸುಧಾರಣೆಯಾಗುವ ಬಗೆ ಹೇಗೆ? ನಮ್ಮ ಮನೆಯಲ್ಲಂತೂ ಸ್ವಾತಂತ್ರ್ಯ, ಸ್ಥಾಪನೆಯಾಗಿಹೋಗಿದೆ. ನಾನೇನೂ ಮಾತಾಡುವಂತಿಲ್ಲ. ತಮ ಗೊಂದು ನನ್ನ ಅರಿಕೆ:—ತಾವಾದರೂ ನಮ್ಮವರಲ್ಲಿ ಬಂದು ನನಗೆ ಖರ್ಚಿಗೇನಾದರೂ ಒಂದಿಷ್ಟು ಹಣಕೊಡುವಂತೆ ಹೇಳಬಾರದೇ?

**ಗೋವಿಂದರಾವ್**: ನಾನೇ! ನನ್ನ ಹೆಂಡತಿ ಇಂದಿರೆಗೂ ನಿಮ್ಮ ಅಮ್ಮಾವರಿಗೂ ಯೆಂದೋ, 'Tug of war' ನಡೆದು 'assembly walk out' ಆಯಿತಂತೆ. ನಾನು ಹೇಗೆ ಹೇಳಲಿ ಆ ಪಾಪ ಮುಖ ವನ್ನು ಸಂದರ್ಶಿಸಲು ನನಗೆ ಇಷ್ಟವಿಲ್ಲ. ನೀವೇಕೆ ಆಕೆಯ ಹಂಗಿನಲ್ಲಿರ ಬೇಕು? ಒಳ್ಳೆ ಬೃಹಸ್ಪತಿಗಳುರೀ! ನೀವು, ಗಂಡುಸಾಗಿಯೂ, ಧೈರ್ಯ ಸಾಹಸಗಳಿಲ್ಲವಲ್ಲಾ.–ಆದ್ದರಿಂದಲೇ ನಿಮ್ಮ ಮೇಲೆ ಸವಾರಿ!

**ಶ್ರೀನಿವಾಸ**: ನಿಜ, ನನಗ್ಯಾವ ಕುಶಲವಿದ್ಯೆಗಳೂ ಬಾರವು. ಬಂದ ವಿದ್ಯೆಯೂ ಮರೆತೆ. ಯಾವರೀತಿ ಸಂಪಾದಿಸಲಿ? ನೀವಂತೂ ಬರೀ ಧಾರ ನೂಲುವುದರಿಂದಲೇ ಸಂಸಾರ ಜರುಗಿಸುತ್ತಿರುವುದು ಬಹು ಆಶ್ಚರ್ಯ ವೆಂದೆಲ್ಲರೂ ಸಾರುವರು. ನಿಮ್ಮ ಕುಟುಂಬದವರೆಲ್ಲರೂ ನಿಮಗೆ ನೆರವಾಗಿ ರುವರು. ನಮ್ಮವರಾದರೋ ಜಗತ್ ಸಂಸಾರೋದ್ಧಾರಕ್ಕಾಗಿ ಹೋರಾ ಡುತ್ತಾ ತಮ್ಮ ಸಂಸಾರವನ್ನು ಈರೀತಿ ಹಾಳುಬಿಟ್ಟಿದ್ದಾರೆ.

**ಗೋವಿಂದರಾವ್**: ನೀವೇಕೆ ಧಾರ ನೂಲುವುದನ್ನು ಕಲಿಯಬಾರದು? ದಿವಸಕ್ಕೆ ಎರಡು ಮೂರಾಣೆಗಳು ಸಂಪಾದಿಸಿದರೆ ನಿಮ್ಮ ಖರ್ಚುಗಳಿ ಗಾಗುವುದಿಲ್ಲವೇ?

**ಶ್ರೀನಿವಾಸ**: ನನಗದು ಕಲಿಸುವಿರಾ? ಪ್ರತಿಯೊಂದಕ್ಕೂ ಆಕೆಗೆ ಬಾಯೊಡ್ಡಲಾರೆ.

**ಗೋವಿಂದರಾವ್**: ನೀವು ನಮ್ಮಮನೆಯಲ್ಲಿ ಬೆಳಿಗ್ಗೆ, ಸಾಯಂಕಾಲ ಬಂದು ಚರಕವಾಡುತ್ತಾ ಬನ್ನಿ, ನೂಲಲು ಹತ್ತಿ ಮುಂತಾದುವುಗಳಿಲ್ಲಿಯೇ

ಇವೆ. ನಾನು ನಿಮಗೆ ದಿನಕ್ಕೆ ಮೂರಾಣೆಯಂತೆ ಕೊಡುವೆನು. [ಇಂದಿರಾ ಬಾಯಿಯವರು ಸಡಗರದಿಂದ ಬಂದು ಶ್ರೀನಿವಾಸನಿಗೆ 'Dash' ಹೊಡೆಯುವರು]

**ಇಂದಿರೆ:** (ಬಹು ಕೋಪಿಸಿಕೊಂಡು) 'Public Road' ನಲ್ಲಿ ನಿಂತು ಕೊಳ್ಳಲು ನನಗೂ ಹಕ್ಕಿದೆಯೆಂದು ದಾರಿಯಲ್ಲೇ ನಿಂತುಬಿಡುವರು. ಹಾಳು 'Liberty' ಗಷ್ಟು ಬೆಂಕೀಹಾಕಿತು. ಈ ಗಂಡಸರಿಗೆ ಮಾಡೊಕ್ಕೆ ಕೆಲಸವಿಲ್ಲ. ಎಲ್ಲೆಲ್ಲೂ 'Retrenchment' (ಟ್ರೊ) ಅದಕ್ಕೇ.-ಬಿಟ್ಟಿ ರೋಡಿದೆಯಲ್ಲಾ ! ; ನಾಳೆ 'Council Meeting' ನಲ್ಲಿ ಇನ್ನು ಮೇಲೆ ಬೀದೀಲಿ ಸುಮ್ಮನೆ ನಿಂತವರಿಗೆ 'fine' ಹಾಕಿ ಸುವಂತೆ ಒಂದು 'Resolution' ತಂದು ಜಾರಿ ಮಾಡಿಸಿ ಬಿಟ್ರೆ ಈ ಹಾಳು 'Crossings' ತಪ್ಪಿಹೋಗುತ್ತೆ, ಸರಕಾರಕ್ಕೂ ಫಾಯಿದೆಯಾಗುತ್ತೆ!'' [ಶ್ರೀನಿವಾಸನಕಡೆ ದುರುದುರು ನೋಡುತ್ತಾ] 'ಓ ಹೋ ನೀವೋ ? ಮನೆ ಬಿಟ್ಟೇಕೆ ಹೊರಗೆ ಬಂದಿರಿ [ಮೆಲ್ಲನೆ] ಗೋವಿಂದ ರಾಯರ ಸ್ನೇಹವೋ ? ಆಗಲಿ ! ಮನೆಗೆ ಬನ್ನಿ ಅ-ಆಗ !!' [ಬಿರಿಬಿರನೆ ಹೊರಟುಹೋಗುವಳು.—ಅವರಿಬ್ಬರೂ ಹೋಗುವರು.]

## ಸ್ಥಾನ ೨.

[ಇಂದಿರಮ್ಮನ ಮನೆ, ಸುಲೋಚನೆಯೊಡನೆ ಕುಳಿತು ಮಾತಾಡುತ್ತಿದ್ದಾಳೆ.]

**ಇಂದಿರೆ:** ಮನೆಯ ಕೆಲಸಗಳೆಲ್ಲವೂ ಹಾಗೆಯೇ ಬಿದ್ದಿವೆ. ಬೀದಿಯಲ್ಲಿ ನಿಂತು, ಅದೂ ಆ ಗೋವಿಂದರಾಯರ ಜೊತೆಯಲ್ಲಿ ನಿಂತು ಉಪನ್ಯಾಸ ನಡೆಸು ತ್ತಿದಾರೆ.

**ಸುಲೋಚನೆ:** ಇದೇನು ? ಗೋವಿಂದರಾಯರ ಸಹವಾಸ ಹೇಗೆ ಮಾಡಿ ಕೊಂಡರು. ನೀವೇಕೆ ಅಲ್ಲಿಯವರೆಗೂ ಸ್ವತಂತ್ರಕೊಟ್ಟಿರಿ ?

**ಇಂದಿರೆ:** ತಾವುಗಳು ನೂಲು ತೆಗೆದು ಗಂಡಹೆಂಡಿರಿಬ್ಬರೂ ದಿವಸಕ್ಕೆ ಆರೇಳಾಣೆಗಳು ಸಂಪಾದಿಸುವಿರಂತೆ ! ಈ ಗೊಡ್ಡಿಗೂ—'' ನೀನೂ

ಮೂರಾಣೆಗಳು ಕಷ್ಟವಿಲ್ಲದೆ ಪಡೆಯಬಹುದು, ಧಾರವಮಾಡು ಆ ಹೆಂಡಿರ ಕೈಕೆಳಗಿರಬೇಡ " ವೆಂದು ಉಪದೇಶಿಸಿದರಂತೆ!

**ಶ್ರೀನಿವಾಸ** : [ಪ್ರವೇಶಿಸಿ ಮರೆಯಲ್ಲಿ ನಿಂತು ಕೇಳುತ್ತಿರುವನು]

**ಸುಲೋಚನೆ** : ತಾವು ತತ್ಕಾಲ ಕಾಲಕ್ಷೇಪ ಮಾಡುತ್ತಿರುವಂತೆ, ಎಲ್ಲರೂ ಇರಬೇಕೆಂದವರಿಷ್ಟ! ಇಷ್ಟು ದಸರಾ ಹಬ್ಬಗಳು ಬಂದು ಹೋಗಿವೆ— ಅವರ ಮನೆಯಲ್ಲೊಂದುದಿನವಾದರೂ ಬೊಂಬೆಗಳಿಟ್ಟಿದ್ದಿಲ್ಲ. ನಮ್ಮ ಮನೆಯಲ್ಲೀಗ ಒಂದು ಸಾವಿರ ರೂಪಾಯಿಗಳ ಬೊಂಬೆಗಳು ತುಂಬಿವೆ! ಅದಲ್ಲದೆ 'London' ನ್ನಿಂದ ಬಹು ವಿಚಿತ್ರ ಸಾಮಾನುಗಳನ್ನು ತಂದಿದಾರೆ.

**ಇಂದಿರೆ** : ನಮ್ಮ ಮನೆಯಲ್ಲೋ ಈ ಧಾರದ ಪಟಗಳಿಗೇನೇ ಎಷ್ಟೋ ದುಡ್ಡು ಸುರಿದಿದೆ! ರಸದ ಗುಂಡು, ಕೊಳವಿಮಣಿಗಳಿಗಂತೂ ಲೆಕ್ಕವಿಲ್ಲ ದಷ್ಟು ಹಾಕಿದೇನೆ. ಒಂದುವೇಳೆ ಇವೆಲ್ಲವೂ ಇಲ್ಲದಿದ್ದರೆ ಈ ಮನೆಯು ಇಷ್ಟು ಅಲಂಕಾರವಾಗಿ ಕಾಣುತ್ತಿತ್ತೇ ?

**ಶ್ರೀನಿವಾಸ** : [ಪ್ರವೇಶಿಸಿ] ನಿಮಗೆ ಪ್ರಾಪಂಚಿಕ ದೃಷ್ಟಿಯಿನ್ನೂ ಬಂದಿಲ್ಲ. ಈ ನಿರರ್ಥಕವಾದ ಪದಾರ್ಥಗಳಿಗೆ ರಕ್ತ ಬಸಿದು ಸಂಪಾದಿಸಿದ ಹಣ ವನ್ನು ಬಹು ಸುಲಭವಾಗಿ ಹಾಳುಮಾಡುತ್ತಿದ್ದೀರಿ. ನಮಗೆ ಹಣದ ಬೆಲೆ ತಿಳಿಯದುದರಿಂದ ಪರದೇಶದವರು ನಮ್ಮ ಮನೆಯಲ್ಲಿ ಮಣ್ಣು ತುಂಬಿ ಅವರು ಹೊನ್ನು ಕೊಳ್ಳುತ್ತಿರುವರು.

**ಇಂದಿರೆ** : ನಿಮ್ಮ ಗೋವಿಂದರಾಯರ ಮನೆಗೆ ಹೋಗಿ, ಬಹು ಶೋಭಾಯ ಮಾನವಾಗಿರುವುದು !—ಈ ಅಲಂಕಾರಗಳಿಲ್ಲದೇನೇ ಬೆಳಗುವುದು !!

**ಶ್ರೀನಿವಾಸ** : ಹೌದು, ನಿಜ, ಆ ಸತ್ಯವತಿಯ ಮನೆ ಬೆಳಗಲು ಈ ಪೊಳ್ಳು ಸಹಕಾರಿಗಳೇಕೆ! ಆಕೆಯ ನಿರ್ಮಲ ಪಾತಿವ್ರತ್ಯಪ್ರಭಾವವೇ ದಿವ್ಯಜ್ಯೋತಿಯಂತೆ ಬೆಳಗುತ್ತಿರುವುದು. ಆಕೆಯ ಮನೆ ಹೊಸಲು

ತುಳಿದ ಎಂತಹ ಪಾಪಿಯಾದರೂ ಸತ್ಯವ್ರತನೂ, ಸದಾಚಾರನೂ ಆಗುವನು.

**ಸುಲೋಚನೆ**: ಸುಂದರಮ್ಮನವರು ಒಹಳವಾಗಿ ಪಾಠ ಹೇಳಿಕೊಟ್ಟಂತೆ ಕಾಣುತ್ತೆ. ನೀವಿನ್ನಿವರ ಜೊತೆಯಲ್ಲೇಗಲಾರಿರಿ....!

**ಇಂದಿರೆ**: ತಾವು ಇನ್ನುಮೇಲೆ ಬೇಕಾದಕಡೆ ಸುಖದಿಂದಿರಬಹುದು. ಮೂರಾಣೆ ಸಂಪಾದಿಸುವ ಶಕ್ತಿ ಬಂದಮೇಲೆ ನಾನೂ ನೀವೂ ಒಟ್ಟಿಗಿರುವುದಾಗದು. ನಿಮ್ಮ ಪಾಪರಾಶಿಗಳನ್ನು ಯಾವಳಿಂದ ಹರಿಸಿಕೊಳ್ಳುತ್ತೀರೋ ನೋಡುವೆ, ಇನ್ನು ಹೊರಡಿ.

**ಶ್ರೀನಿವಾಸ**: [ಸ್ವಗತ]ಹೇ ದೇವರೆ! ಇಂದಿಗೆ ನನ್ನನ್ನು ಬಂಧಮುಕ್ತನನ್ನಾಗಿ ಮಾಡಿದೆ. ಇನ್ನು ನಾನು ನಿನ್ನ ದಿವ್ಯ ನಾಮ ಸ್ಮರಣೆ ಮಾಡುತ್ತಾ ಮಹಾತ್ಮರು ತೋರಿದ ಹಾದಿಯಲ್ಲಿ ದೇಶಸೇವೆ ಮಾಡುವೆನು. ಈ ನೀಚ ಸ್ತ್ರೀಯರು ತಮ್ಮ ಕರ್ತವ್ಯವನ್ನು ಮರೆತಿರುವರು. ಅನೇಕ ಮಹರ್ಷಿಗಳಿಂದ ರಚಿತವಾಗಿ ಈ ಲೋಕದಲ್ಲಿ ಸ್ಥಾಪಿಸಲ್ಪಟ್ಟಿರುವ ಸಾಮಾಜಿಕ ಕಟ್ಟಳೆಗಳನ್ನು ಮುರಿಯುವವರಿದ್ದಾರೆ. ಆದರೆ ಬಹುಕಾಲದಿಂದ ನೆಲೆಸಿ, ಬಹುಜನರ ಸಮ್ಮತಿಗರ್ಹವಾದುದರಿಂದ ಅದನ್ನೆಂದಿಗೂ ಅಳಿಸಲಾಗದು. ನಾನೂ ಪರಿಪರಿಯಾಗಿ ಅವರ ಮೌಢ್ಯವನ್ನು ಹರಿಸಲು ಪ್ರಯತ್ನಿಸಿ ಸಾಧಿಸಲಾರದೆ ಹೋದೆ. ಅವರಿಗೂ, ಹೇ ದಯಾನಿಧೇ— ನೀನೇ ಗತಿ. ಬೇಗ ಅವರಿಗೆ ಎಚ್ಚರಕೊಟ್ಟು ಅಭಯನೀಡು. ಇಲ್ಲದಿದ್ದರೆ ನಾಶವಾದಾರು. [ಇಂದಿರೆಯ ಕಡೆ ತಿರುಗಿ] 'ದೈವಕೃಪೆ ನಿಮ್ಮ ಮೇಲಿರಲಿ. ನಾನು ಹೊರಡುವೆನು............' [ಹೋಗುವನು]

## ಸ್ಥಾನ ೩.

[ಖಾದಿ ವಸ್ತ್ರಗಳನ್ನು ಧರಿಸಿ ಪ್ರವೇಶಿಸಿ]

**ಮಾಧು**: ಜಯು ಹಿಂತಿರುಗಿ ಬಂದು ಮೂರು ತಿಂಗಳಾಯಿತು. ಒಡಹುಟ್ಟಿದವನಂತೆ ಬಹು ಪ್ರೀತಿಯಿಂದಿದ್ದು ತನ್ನ ಪ್ರತಿಯೊಂದು ಗೃಹ

ಕೃತ್ಯಗಳನ್ನೂ, ಗೂಢವಿಚಾರಗಳನ್ನೂ ನನ್ನಲ್ಲಿ ಬಿಚ್ಚಿ ಹೇಳುತ್ತಾ, ಪ್ರತಿಯೊಂದು ಕಾರ್ಯದಲ್ಲಿಯೂ ನನ್ನ ಸಲಹೆಯನ್ನೇ ಕೇಳುತ್ತಿದ್ದವನು ಇದು ವರೆಗೂ ನನ್ನನ್ನು ನೆನೆಯದಿರುವುದು ಬಹಳ ಆಶ್ಚರ್ಯ. ಪರದೇಶದಲ್ಲಿ ವ್ಯಾಸಂಗಮುಗಿಸಿಬಂದುದಕ್ಕಾಗಿ, ಇನ್ನೆಲ್ಲಿಯೂ ಹಾಲಿ ಕೆಲಸವಿಲ್ಲದುದರಿಂದ ಈ ಊರು ಹೈ ಸ್ಕೂಲಿನಲ್ಲಿ 'Head Master' ಆಗಿ, ಇನ್ನೂರೈವತ್ತು ರೂಪಾಯಿ ಸಂಬಳದ ಮೇಲೆ ಕಳುಹಿಸಿದ್ದಾರಂತೆ. ಇದ್ದುದರಲ್ಲಿ ವೈಸವಾಯಿತು !—ನನಗಿದು ಬಹು ಸಂತೋಷ ವಿಚಾರ. ಆತನು ಭ್ರಾತೃ ಸಮಾನನೇ—ಹೌದು. ಆತನ ಶ್ರೇಯಸ್ಸೇ ನನ್ನ ಪ್ರಾರ್ಥನೆ. ನಾನೇ ಹೋಗಿ ಆತನನ್ನು ಮನೆಯಲ್ಲಿ ಕಾಣುವೆನು.

## ಸ್ಥಾನ ೪.

[ಸುಂದರಾಬಾಯಿಯ ಮನೆ. ಗೋವಿಂದರಾಯರೂ ೪ ಜನ ಮಕ್ಕಳೂ ಕುಳಿತು, ಸುಂದರಮ್ಮನು ಚರಕ ಮಾಡುತ್ತಾ]

['ಗುಮ್ಮನ ಕರೆಯದಿರೆ— ಅಮ್ಮಾ ಎಂಬಂತೆ]

ಬಲು ದಾರಿದ್ರ್ಯದ ಪರಿಹಾರಕೆ ಸಾಧನ|
ರಾಟೆಯ ತಿರುಗಿಸುವೇ || ಪ ||
ಅರಿಷಡ್ವರ್ಗವನೋಡಿಪರಾಟಿ |
ಅಜ್ಞಾನದ ಪರಿವರ್ತನಕಾಗಿ || ರಾಟೆಯ ||
ಜೀವನದಾ ಹೊರೆ ಇಳಿವುದು ಖಾದಿ! |
ಬಡವರ ಮುಕ್ತಾಫಲವದು ಖಾದಿ |
ಮುತ್ತು ಶ್ರೀ ಕೃಷ್ಣನ ಕಾಣಲು ಹಾದಿ |
ಪಡಿದೆನು ಚರಕವನದಕಾಗಿ || ರಾಟೆಯ ||

ಎಂದು ಹಾಡುತ್ತಿರುವಳು.

**ಸುಂದರಮ್ಮ**: ಮುಂದಿನವಾರದಿಂದ ದಸರಾ ಹಬ್ಬ ಪ್ರಾರಂಭವಾಗುತ್ತೆ. ಮಕ್ಕಳಿಗೆ ಬಟ್ಟೆ ಹೊಲಿಸಿ ವರ್ಷವಾಯಿತು

**ಗೋವಿಂದರಾವ್** : ಹೌದು ನಾನು **ಅದಕ್ಕೆಂದೇ** ಐದಾರು **ರೂಪಾಯಿ** ಗಳನ್ನು ಸರಿಮಾಡಿದ್ದೇನೆ. ಇನ್ನೂ ಎರಡು ಮೂರು ರೂಪಾಯಿಗಳು ಬೇಕಾಗುವುದು.

**ಸುಂದರಮ್ಮ** : ನನ್ನ ಬಳಿ ಎಂಟು—ಹತ್ತು ಪೌಂಡುಗಳು ನೂತಧಾರವಿದೆ. ಮಾರಿ ಬಂದ ಐದಾರು ರೂಪಾಯಿಗಳಲ್ಲಿ ಸಾಧಾರಣವಾದ ಬಟ್ಟೆ ನೋಡಿ ಹೊಲಿಸಿ. ನಮಗಷ್ಟೇನೂ ಆಡಂಬರ ಬೇಡ.

**ಗೋವಿಂದರಾವ್** : ನೀನು ದುಡಿದು ಪಡೆದ ಲಾಭದಿಂದ ನೀನೂ ಒಂದು ಒಳ್ಳೆ ಖಾದಿಸೀರೆಯನ್ನು ಕೊಂಡುಕೋ. ಈಗೇನು ಖಾದಿ ಸೀರೆಗಳು ಬಹು ಅಗ್ಗವೂ ಅಂದವಾಗಿಯೂ ಇರುತ್ತೆ.

**ಸುಂದರಮ್ಮ** : ನನಗೀಗೇನೂ ಸೀರೆ ಬೇಡ. ನೀವು ಸಾಲಮಾಡಿ ತಂದ ಸೀರೆಯುಟ್ಟು ಮೆರೆಯಲು ನನಗಿಷ್ಟವಿಲ್ಲ. ಆ ಸಾಲ ತೀರಿ ಸಲು ಹೊಟ್ಟೆಕಟ್ಟಿ ಕಷ್ಟಪಡಬೇಕಾಗುವುದು. ಮಕ್ಕಳಿಗೆ ಹೊಸ ತೊಡಿಗೆಗಳಾದರೆ ನನಗದೇ ಸಂತೋಷ.

**ಗೋವಿಂದರಾವ್** : [ಮಕ್ಕಳಕಡೆ ನೋಡಿ] ನೋಡಿದಿರಾ ನಿಮ್ಮ ತಾಯಿಯ ಧನ್ಯಗುಣಗಳು. [ಸುಂದರಮ್ಮನ ಕಡೆ ತಿರುಗಿ] ನನ್ನ ಹಿತ ಚಿಂತಕಳು ನೀನಲ್ಲದೆ ಮತ್ಯಾರು? ನಿನ್ನಿಂದ ನನ್ನ ಸಂಸಾರ ನಾವೆಯು ಈ ಕಷ್ಟಸಾಗರದಲ್ಲಿಯೂ ಸಂತೋಷದಿಂದ ತೇಲುತ್ತಿದೆ. ಇಂದಿರೆ ಯಂಥಹ ಪತ್ನಿಯು ದೊರಕಿ, ಸಂಸಾರದಲ್ಲಿ ಈ ಬಡತನ ತಲೆ ದೋರಿದ್ದರೆ ನಾನು ಮಾಡತಕ್ಕುದೇನಿತ್ತು. ನಿನ್ನ ಕೈ ಹಿಡಿದ ಮೇಲೆ ನಾನೆಂದೂ ಬಡವನೆಂದುಕೊಳ್ಳಲಿಲ್ಲ.

**ಸುಂದರಮ್ಮ** : ಸುಮ್ಮನೆ ಹೊಗಳುವಿರಿ. ನಾನು ಮಾಡಿರುವುದೇನು? ಸಂತುಷ್ಟಿಯಿಂದ ನಾವಿಬ್ಬರೂ ಆರ್ಜಿಸುವ ಆರಾಣೆಯು ಈ ಸಂಸಾರ ವನ್ನು ಜರುಗಿಸುತ್ತಿದೆ. ನನ್ನಮನೆಯಲ್ಲಿ ನನಗೆ ಸ್ವಾತಂತ್ರ್ಯವಿಲ್ಲವೇ? ಶಾಂತಿ ಸುಖಸಂಪತ್ತುಗಳಿಲ್ಲವೆ? ಎಲ್ಲರೂ ಹೀಗೇಕೆ ಜೀವಿಸಬಾರದೋ ಕಾಣೆ.

[ಶ್ರೀನಿವಾಸರಾಯರ ಪ್ರವೇಶ—ಸ್ವಚ್ಛ ಖಾದಿ ಉಡುಪು]

**ಗೊವಿಂದರಾವ್** : ಇದೇಕೆ ರಾಯರು ಈ ವಾರದಲ್ಲಿ ಬರಲೇ ಇಲ್ಲವಲ್ಲ ?

**ಶ್ರೀನಿವಾಸ** : ಏನು ಹೇಳಲಿ ? ನಮ್ಮ .... ಕೋಣೆಯಲ್ಲಿ ಕೂಡಿಬಿಟ್ಟಿದ್ದರು. ನನ್ನಲ್ಲಿ ಬದಲಾವಣೆ ಯಾಗುತ್ತಿದೆಯೆಂತಲೂ. ಹೀಗೆ ತಮ್ಮ ಜೊತೆ ಸೇರಿದರೆ ಮನೆಬಿಟ್ಟು ಓಡಿಸುವುದಾಗಿ ಹೇಳಿದರು. ಅದಕ್ಕೆ ನನಗೆ ಸಂತೋಷವೇ ಆಯಿತು. ನೀವು ಕಲಿಸಿದ ಕುಶಲತೆಯಿಂದ ನಾನೂ ತಿಂಗಳಿಗೆ ಏಳೆಂಟು ರೂಪಾಯಿ ಸಂಪಾದಿಸಬಲ್ಲೆ. ನನಗಂತೂ ಚರಕವು ಬಡವರ ಕಾಮಧೇನುವೆಂದು ತೋರುತ್ತೆ. ನನಗದರಿಂದ ಧೈರ್ಯ ಬಂದು ಈವತ್ತಿನಿಂದ ಆಕೆಯ ಮನೆಗೆ ಬರುವುದಿಲ್ಲವೆಂದು ಹೇಳಿಬಿಟ್ಟೆ. ಅವರೇನೋ ಸುಲೋಚನೆಯ ಮನೆಯಲ್ಲಿಯೇ ಹೋಗಿದ್ದುಬಿಡುವುದಾಗಿ ಕೇಳಿದ್ದೆ.

**ಗೋವಿಂದರಾವ್** ; ಆ ಹೊಸದಾಗಿ ಬಂದ 'Head Master' ರನ್ನೂ ಬುಟ್ಟಿಗೆ ಹಾಕಿಕೊಂಡರೊ ?

**ಶ್ರೀನಿವಾಸ** : ಅವರ ಹೆಂಡತಿಯವರಿಗೂ ನಮ್ಮವರಿಗೂ ಬಹು ಸ್ನೇಹ ಕಿತ್ತರೂ ಕೀಳದು. ನಡೀಲಿ, ನಡೀಲಿ, ಪ್ರಪಂಚ :—ನಾನಾವಿಧ, ಬೇರೆ ಬೇರೆ ತರಹ, ಆಶ್ಚರ್ಯ, ಕುರಿಗಳು ಮರಿಗಳನ್ನೇ ಹಾಕುತ್ತವೆ ! ಹಸುಗಳು ಕರುಗಳನ್ನೇ ಈನುತ್ತವೆ !........ನನಗೇತಕಿನ್ನು, ಆಕೆಯ ಚಿಂತೆ........

**ಗೋವಿಂದರಾವ್** : ಬಹು ಅನ್ಯಾಯ ಸರಿಯಾಗಿ ಬುದ್ಧಿ ಹೇಳುವ ಯಜಮಾನನಿಲ್ಲದಮನೆಗಳು ಹೀಗೆಯೇ ಅಲ್ಲವೇ ಮುರಿಯುವುವು ? ಸ್ವಾತಂತ್ರ್ಯವೆಂದರೆ ಯೆಲ್ಲಂದರಲ್ಲಿ ಜೀವಿಸುವುದೋ ? ಬೇವಾರ್‍ಸ್ ಗೊಡ್ಡುಗಳಿಗೆ ಮನೆಯಾದರೂ ದೊಡ್ಡಿಯಾದರೂ ; ಎಲ್ಲಾವೊಂದೇ ಪವಿತ್ರ ಪತಿಭಕ್ತಿ ಪುತ್ರವಾತ್ಸಲ್ಯ, ನಯವಿನಯಗಳು, ಈ ತೊಂಡುಜೀವಗಳಿಗೆಲ್ಲಿಯದು ? ನಾನಲ್ಪವೇ ಸಂಪಾದಿಸಿದರೂ, ನನ್ನ ಸತಿಯಿಂದ, ಅಧಿಕ ಸುಖಶಾಂತಿಗಳು ದೈವಕೃಪೆಯಿಂದ ನೆಲೆಸಿವೆ.

---

## ಅಂಕ ೩.

### ಸ್ಥಾನ ೧.

[ಸುಲೋಚನೆ, ಜಯು, ಇಂದಿರೆ ಮೂವರೂ ಮೇಜಿನ ಮುಂದೆ ಕೂತಿರುವರು, ಮೇಜಿನಮೇಲೆ ಕಾಫಿ-ದಿಂಡಿಗಲ್ ಚುಟ್ಟ, ಬ್ರಾಂದಿ ಬಾಟ್ಲುಗಳು ಸಿದ್ಧವಾಗಿವೆ]

**ಜಯು :** ಇಂದಃ ಸಾಯಂಕಾಲ Tennis ಆಡಲು ಹೋಗಬೇಕು. ಹಾಗೆ "Ramon Novarro's, Picture" ಗೂ 'Visit' ಕೊಟ್ಟು ಬರಬೇಕೆಂದು 'Programme' ಆಗಿರುತ್ತೆ. ನೀವೂ ಬರುವಿರಾ ?

**ಇಂದಿರೆ :** ಅದಕ್ಕೇನು 'Tennis Bat' ಒಂದನ್ನೂ ಅದಕ್ಕೆ ತಕ್ಕ 'Suit' ನ್ನೂ ಈಗಲೇ ಕೊಂಡುತರಬೇಕು. ನಾನೂ ಸುಲೋಚನೆಯೂ ಪೇಟೆಗೀಗಲೇ ಹೋಗಿ ತಂದೇಬಿಡುವೆವು.

**ಸುಲೋಚನೆ :** ನಾವು ನೋಡಿ ಬಂದಿರುವ 'Laced silk sadis' ಗಳು ಸಿನಿಮಾಗೆ ಹೋಗುವಾಗ ಉಡಲಾಗುತ್ತೆ. ಎಲ್ಲವೂ ನಿಮ್ಮ ಹೆಸರಿನಲ್ಲಿ ಲೆಖ್ಖ ಬರೆದು ತರುತ್ತೇನೆ.

**ಜಯು :** ಹಾಗೆಯೇ ಆಗಲಿ ಬೇಕಾದುದನ್ನೆಲ್ಲಾ ತನ್ನಿ. ನಿನ್ನೆ ಭಂಗಾರದ ಬಳೆಗಳಿಗೂ ವಜ್ರದುಂಗುರಗಳಿಗೂ ಹೇಳಿದ್ದೆ. ಮ|| ಕೃಷ್ಣಯ್ಯಶೆಟ್ರವರ ಅಂಗಡಿಗೆ ಹೋಗಿ ಕೇಳಿದರೆ ಕೊಡುತ್ತಾರೆ. ನೀ ನೀವತ್ತು ಆ ಆಭರಣಗಳನ್ನಿಟ್ಟುಕೊಂಡು ಬಂದರೆ ನಿನ್ನ ಸೌಂದರ್ಯವು ನೂರ್ಮಡಿಯಾಗುವುದು. 'Taxi' ಯಲ್ಲಿ ಹೋಗಿಬನ್ನಿ.

**ಸುಲೋಚನೆ :** ನೀವೆಲ್ಲಿಗೆ ಹೋಗುವಿರಿ ?

**ಜಯು :** ನಾನು ಮನೆಯಲ್ಲೇ ಇರುತ್ತೇನೆ. ನನ್ನ 'Status' ಗೆ

ಯೋಗ್ಯರಾದ ಮಿತ್ರಮಂಡಲಿಯವರಾರೂ ಇಲ್ಲ. ಈ ಅನಾಗರೀಕರಾದ ನೆರೆಯವರ ಸಂಗ ಬಹು ಬೇಸರಿಕೆ.

**ಇಂದಿರಮ್ಮ :** ಪ್ರಪಂಚದಲ್ಲಿ ಜನ್ಮಸಿರುವ ಉದ್ದಿಶ್ಯವನ್ನೇ ಅರಿಯದ ಮೂಢರವರು. ಸ್ವರ್ಗಸುಖವನ್ನನುಭವಿಸುವ ಅನುಕೂಲವಿದ್ದರೂ ಈ ಲೋಕವನ್ನು ನರಕವೆಂದು ಇದರಿಂದ ಮುಕ್ತರಾಗುವ ಯೋಚನೆಯೇ ಹೊರತು, ಮಾನವ ಸುಖಕ್ಕಾಗಿ ಏರ್ಪಟ್ಟಿರುವ ಆಟಪಾಟಗಳಾದಿಯಾಗಿ ಅನೇಕ ಸಂತೋಷಗಳನ್ನೂ ಪಾನೀಯ, ಸಿನಿಮ, ನಾಟಕ ಮುಂತಾದ ವಿನೋದಗಳನ್ನೂ ಅರಿಯರು. ನಮ್ಮ ಸ್ತ್ರೀಯರಂತೂ ಮನೆಯಿಂದ ಹೊರಗೆ ಕೂಡ ಹೋಗುವಂತಿಲ್ಲ. ಇಂಥ ಸುಖಗಳು ಕನಸಕಂಡಂತಾಗಿವೆ. ಅವರಿಗೆ ಸ್ವಾತಂತ್ರ್ಯದ ಫಲಗಳು ಚೆನ್ನಾಗಿ ತಿಳಿದರೆ ಮೇಲು.

**ಸುಲೋಚನೆ :** ಈ ಸುಖವನ್ನು ಅನುಭವಿಸಲು ಕೇಳಿಕೊಂಡು ಬಂದಿರಬೇಕಲ್ಲಾ ! ಪಾಮರರಿಗೆಲ್ಲಿಯದು ! ನಡೀರಿ—ಕಾಫಿ ಕುಡಿದು ಮುಂದೆ ಹೊರಡೋಣ ; ಬಹಳ ಕೆಲಸಗಳೂ ಉಳಿದಿವೆ..................

(ಅಷ್ಟರಲ್ಲಿ ಮಾಧವನು ಪ್ರವೇಶಿಸುವನು)

**ಮಾಧು :** ನಮಸ್ಕಾರ-ಮಹಾಸ್ವಾಮಿ.

**ಜಯು :** "What is this nuisance?" ನನ್ನ ಏಕಾಂತಗೃಹದಲ್ಲಿ ಬಹು ಧೈರ್ಯದಿಂದ ನುಗ್ಗಿ ಎಷ್ಟು ಸಲಿಗೆಯಿಂದ ಮಾತನಾಡಿಸುವನು ! ಯಾವನಿವನನ್ನು ಒಳಗೆ ಬಿಟ್ಟವನು ? ಹೊರಗೆ ಜವಾನರ್‍ಯಾರೂ ಗತಿಯಿಲ್ಲವೇ ? ಲೋ-ನಂಜಾ ! ಕತ್ತೇ ಮಗನೇ !

**ನಂಜ :** 'ಬುದ್ಧೀ!.... '

**ಜಯು :** ಎಲ್ಲಿ ಕತ್ತೆ ಕಾಯುತ್ತಿದ್ದ್ಯೋ ? ಮನೆ ಕಾಯುವುದಕ್ಕಿಂತ ಕೆಲಸ ಬೇರೆ ಏನೋ ನಿನಗೆ ? ನೋಡು ಇಲ್ಲಿ ನಡೆದಿರುವ ಅನಾಚಾರ ! ಈತನಿಗೆ ಮನೆಯಲ್ಲಿ ನುಗ್ಗುವ ಕೆಲಸವೇನಿತ್ತು ? ನೂಕು ಈತನನ್ನಾಚೆಗೆ.

**ಮಾಧು:** ಎಂಥ ಪ್ರಮಾದವಾಯಿತು? ಜಯು! ನಾನು ನಿನ್ನ ಭ್ರಾತೃ ಸಮಾನನಾದ ಮಾಧುವು. ನೀನು ಸಮುದ್ರಯಾನಕ್ಕೆ ಸಿದ್ಧನಾಗಲು ಮುಂಚೆಯೇ ನನ್ನಪ್ಪಣೆ ಪಡೆದು ಹೋದೆಯಲ್ಲಾ ಅಂದಿನ ಬಂಧುತ್ವ ವನ್ನು ಹೇಗೆ ಮರೆತೆ? ನನ್ನನ್ನು ನೀನು ಹೀಗೆ ಆದರಿಸುವೆಯಾ?

**ಜಯು:** ನೀವ್ಯಾರಾದರೂ ಆಗಲಿ, ಮೊದಲು ಹೊರಡಿ. ನನಗೆ ಗೊತ್ತಿದೆ. ಮನೆಯ ಬಳಿ ಬಂದು ನನ್ನನ್ನು ಅಜ್ಞಾನ ಪುರಾಣಗಳಿಂದ ಬೆರಗುಮಾಡಿ ಉಪಕಾರ ಹೊಂದಲು ಬಂದಿರುವುದು.

**ಮಾಧು:** ಅಲ್ಲ—ನಿಜವಾಗಿಯೂ ಅಲ್ಲ. ನಿನ್ನಿಂದ ಎಳ್ಳಷ್ಟೂ ಉಪಕಾರ ಬೇಡ. ನನ್ನನ್ನು ನೀನು ಜ್ಞಾಪಿಸಿಕೊಂಡರೆ ನೀನೇ ಯಾರೆಂಬುದನ್ನು ತಿಳಿಯುವೆ.

**ಜಯು:** ನನಗೆ ಜ್ಞಾಪಕಶಕ್ತಿ ಕಡಿಮೆ. ನನ್ನಿಂದಾವ ಫಲವೂ ತಮಗೆ ದೊರೆಯದು. ದಯವಿಟ್ಟು ಹೊರಗೆ ಹೊರಡಿ.

**ಸುಲೋಚನೆ:** ಕಾಫಿ ಕುಡಿಯಬನ್ನಿ—'ಕಾರ್' ಕಾದಿದೆ.

(ನಂಜನು ಮಾಧುವನ್ನು ಕಳುಹಿಸುತ್ತಾನೆ)

**ಮಾಧು:** [ಮುಂದೆ ಬಂದು] ದೈವವೇ, ಮರ್ಯಾದೆಯಾಯಿತು. ಸಹವಾಸ ದೋಷ! ನಾನು ಒಳಗೆ ಬಂದ ಮಾತ್ರಕ್ಕಾದ ಪ್ರಮಾದವೇನು. ಆಗಲಿ ಮತ್ತೊಂದು ಸಾರಿ ಸಮಯಕಾದು ಭೇಟಿಯಾಗುವೆನು. ಆತನಿಗೆ ಬುದ್ಧಿ ಹೇಳಲೂ ನನಗೆ ಹಕ್ಕಿದೆ. ಇತ್ತೀಚೆಗೆ ಆತನ ನಡತೆಯೂ ಬಹು ನಿಂದಾಸ್ಪದವಾದಂತೆ ಕಾಣುತ್ತೆ "ಮಾಧು! ಪಾಶ್ಚಿಮಾತ್ಯ ಸಂಸ್ಕೃತಿಯ ತಿರುಳನ್ನರಿಯದೆ ನಮ್ಮ ಸಂಸ್ಕೃತಿಯನ್ನು ಕೈಬಿಟ್ಟು, ನೀನು,-ತ್ರಿಶಂಕು ಸ್ವರ್ಗದಲ್ಲಿದ್ದೀಯೆ. ಈ ಪೊಳ್ಳು ಸುಖಗಳು ನಮ್ಮನ್ನು ದೋಚಿ ಪರದೇಶದವರು ಧನವಂತರಾಗಲು ಮಾರ್ಗವೇ ಹೊರತು ಉನ್ನತಿಗೆ ಸಹಕಾರಿಗಳಲ್ಲ. ಬೇಗನೆ-ಎಚ್ಚೆತ್ತು ಊಟವಿಲ್ಲದೆ ಸಾಯುತ್ತಿರುವ ನಿನ್ನ ತಂಗಿ

ತೆಮ್ಮಂದಿರಿಗೆ ಅನ್ನದಾನಮಾಡು. ಪರದೇಶೀಯರ ಆಚಾರಗಳಿಗೆ ಬರೆಹಾಕು .ಆಗಲಿ ಸಮಯ ಬಂದಾಗ ನಿನಗೆ ಬುದ್ಧಿ ಹೇಳುವೆನು. ದೇವರಿದಾನೆ ನೋಡುವ! ''

## ಸ್ಥಾನ ೨

[ಕುರುಬನು ಪ್ರವೇಶಿಸಿ]

ಬುದ್ದೀ! ನನ್ಕ ನಾಳೆ ವತೀನೆ ಶೋಬಣ, ಅಲ್ಲಾ-ದಾರಾಮೂತ್ರ, ಆಗ್ತೈತೆ. ನಮ್ಮವ್ವಯ್ಯ - ಯೀಸ್‌ದಿನ್ನಿಂಕಾ-ಸಂಜೀವಪ್ನೋರು !—ಜೋಡೀದಾರ್ರು! ನೀವು ನೋಡಲ್ವ—ಆ ಬುದ್ದೀವ್ರವ್ನೋರ ಮನೇಲಿ-ಕೆಲಸಮಾಡಿಕೊಣ್ಣಿ, ನನ್ಕಡೆ ಮನ್ಸೀಬರ್‍ರಿಲ್ಲಾ— ದೇವರೆಂತೆಂತೋ ಅವಳಿಗೆ ನನ್‌ಗ್ನಾಪಕ ಮಾಡ್ಸಿ—ನಂತಾವಬಿಟ್ಟವ್ನೆ ನನ್ಗೊಂದು ಚಲೋ ಹುಡ್ಗೀನಾ ನಮ್ಹಳ್ಳ್ಯಾಗೇ ನೋಡವ್ನೆ ನಾಳೆ ಅವಳ್ಗೂ ನನ್ಗೂ ದಾರಾಮೂತ್ರ. ಬಲು ಆನಂದ........

ನಾನೊಂದು ಮದ್ವೇಯಮಾಡಿಕೊಂಬೇ |
ಅದ್ರ ಆನಂದವನು ನಾ ಹೇಳಿಕೊಂಬೇ || ಪ ||
ಹಾರಾ ತುರಾಯಿಗಳ ಹಾಕಿಕೊಂಬೇ
ಜೋಡುಸಾರ್ವಾಟು ಮೇಲೆ ನಾ ಕೂತುಕೊಂಬೇ || ೧ ||
ಒಳ್ಳೆ ಬೀಡೀನ ಬಾಯಲ್ಲಿ ಕಚ್ಚಿಕೊಂಬೇ |
ಜೋಕು ಹುಡ್ಗೀಯಮೇಲೆ ಕೈಹಾಕಿಕೊಂಬೇ |
ಮಜಾದಮೇಲೆ ಹಾರ ಹಾಕಿಕೊಂಬೇ—ಕಣಗಿಲೆಹಾರ ||
ಮದ್ವೆ ಹುಡ್ಗೀಯ ನೋಡಿ ನೋಡಿ! ಕುಣಿದಾಡುವೇ ||

ಇಲ್ಯಾರೋ ಜಯಕುಮಾರಪ್ನೋರಂತಲ್ಲಾಪ್ಪಾ ನೀವರೀರಾ? ಇನ್ನೊಳಾಗ ಈಸೀಸ್‌ತಾರ ಪುಚ್ಕ ಪೋದ್ದಿವ್ರಿ!!! ನಿಮ್ಕೇ

ಗೊತ್ತಿಲ್ಲಾ ಅಂದ್ರೇ ನಮ್ಕೇ ನಗೂ ಬರ್ತೈತೆ—ಅವರ್ಮನೇಕ್ಹೋಗಿ ಇನಾಂ ತರ್ತೀನ್ರಪ್ಪಾ.

ಅಲ್ಲಾ—ನಮ್ಮಣ್ಣಾನೂ - ಇಸ್ಕೂಲ್ಹೋಗ್ತಿದ್ದಾ - ಅಲ್ಲಿ-ಬಲ್‌ಕಲಿತ್ನಪ್ಪಾ !........

ಗ

ಬೀಡಿ ಸೇದಾ ಕಲಿತ ನಮ್ಮಣ್ಣ | ಶಾಲೇಗೆ ಹೋಗಿ ||ಪ||

ಬೀಡಿ ಸಿಗರೇಟು ಎಳೆಯ ಕಲಿತ |
ಓದು ಪಾಠಗಳನ್ನೆ ಮರೆತ ||
ಬೀದಿ ಬೀದಿ ಅಲೆಯ ಕಲೆತ |
ತನಗೆ ತಾನೇ ರಾಜನೆಂದಾ || ೧ ||

ಚೋರತನದಲ್ಲಿ ಹೆಸರುಪಡೆದ |
ಬ್ರಾಂದಿ ಬಾಟ್ಲು ಹೊಡೆಯ ಕಲಿತ ||
ಹೆಣ್ಣು ಮಣ್ಣಿನ ದಾಸನಾಗಿ !
ಮುಕ್ತಿಮಾರ್ಗವ ಕಂಡುಕೊಂಡ || ೨ ||

ಹೊತ್ತಾಯ್ತು ಹೋಗ್ಗೋ ಅಂತಿರಾ ? ದಾರೀ ಆದ್ರೂ ಹೇಳೀಪ್ಪಾ.... ............[ಹೋಗುವನು]

## ಸ್ಥಾನ ೩.

[ಜಯು ಮನೆ—ಸುಲೋಚನೆಯೊಂದಿಗೆ ಕೂತಿರುವನು]

**ಸುಲೋಚನೆ :** ಇಂದು ನಮ್ಮ ಸಮಾಜದ ಮಿತ್ರಮಂಡಲಿಯವರಿಗೆ ನಮ್ಮ ಮನೆಯಲ್ಲಿ ಔತಣಮಾಡಿಸಬೇಕೆಂದು ನನಗೆ ಮನವಿದೆ. ನೀವೆಲ್ಲಿಯಾದರೂ ಹೊರಗೆ ಸುತ್ತಿಕೊಂಡು ಕೊಂಚ ಹೊತ್ತಾಗಿಬನ್ನಿ— ಅಲ್ಲಿಗೆಲ್ಲವೂ ಮುಗಿದಿರುತ್ತೆ.

**ಜಯು :** ಅಗತ್ಯವಾಗಿಯಾಗಲಿ–ಈ ರಾತ್ರಿ 'All night dance'ಗೆ ಹೋಗಿ ಬೆಳಿಗ್ಗೇನೇ ಬರುವೆನು. ನೀವು ಸಂತೋಷದಿಂಧ ಕಾಲ ಕಳೆಯಬಹುದು.

**ಸುಲೋಚನೆ :** ಖರ್ಚಿಗಾಗಿ ಐನೂರು ರೂಪಾಯಿಗಳು ಬೇಕಾಗಿವೆಯಲ್ಲಾ ?

**ಜಯು :** ದುಡ್ಡು ಮಾತ್ರ ಕೇಳಬೇಡ–ಇಂದು ಸ್ಕೂಲಿನಲ್ಲಿ ವಸೂಲಾದ ಹಣದಲ್ಲೇ ಖರ್ಚುಮಾಡಬೇಕೆಂದಿದ್ದೇನೆ.

**ಸುಲೋಚನೆ :** ಆ 'Purse' ನ್ನು ಇಲ್ಲಿ ಕೊಡಿ–ನಾಳೆ ಬಂದ ಸಂಬಳದಲ್ಲಿ–ಹಣ ಕಟ್ಟಿದರಾಗುತ್ತೆ–ಸ್ಕೂಲೇ ನಿಮ್ಮ ಕೈಲಿಧೆ !–ಕೇಳುವವರಾರು ?

**ಜಯು :** ಹಾಗಾಗದು–ಸರಕಾರದ ಹಣವನ್ನು– ಇಷ್ಟಲಕ್ಷ್ಯವಾಡ ಬಾರದು.

**ಸುಲೋಚನೆ :** ಬೆಳಗ್ಗೆ ಸಾ|| ಹುಸೇನ್ ಸಾಹೇಬರಲ್ಲಿ ಒಂದು ಸಾವಿರ ರೂಪಾಯಿ ಸಾಲ ತಂದರಾಯಿತು ! ಏನು ಪ್ರಮಾದ ! ನಾನಂತೂ ನೀವು ಕೈತುಂಬ ಸಂಪಾದಿಸುವಿರೆಂಬ ನಂಬಿಕೆಯಿಂದ ನನ್ನ ಕೈಲಿದ್ದ ಹಣವೆಲ್ಲವನ್ನೂ ವೆಚ್ಚಮಾಡಿಬಿಟ್ಟೆ [ಸ್ವಗತ] ಅಂದರೆ ಯಾರು ? ಎಲ್ಲಾ ನನ್ನ ಸ್ನೇಹಿತರೇ ಅಲ್ಲವೇ ತಿಂದುದು ? ಹೋದರೆ ಹೋಗಲಿ !

[Purse ಕಿತ್ತುಕೊಂಡು ಹೋಗುವಳು]

[ಗೋಪಾಲಶೆಟ್ರು ಪ್ರವೇಶಿಸಿ]

**ಶೆಟ್ರು :** ನಮುಸ್ಕಾರಮುಂಡಾ ದೇವುಡಾ—ಸೌಖ್ಯಮಾ ? ಅಮ್ಮಾವಾಳ್ಳೆಷ್ಯುಂಡಾರು ?—ಬಾಕೀಕಿ ರಾಲೇದಂಡಾ–ಇಪ್ಪುಡು ವಡ್ಡಿಮಾತ್ರ ಮಿಸ್ತೆ ಶಾಲು–ಮುಂದಟಿ ನೆಲಲೋ ಅಸಲುರಾನಿ. ಈಪದ್ದೋ ರೇಪೋ ಸಂಬಳಮು ? ದೇವುಡಾ................

**ಜಯು :** ಶೆಟ್ರೇ–ನೀವು ಮನೆ ಬಳಿ ಬರಬೇಡಿ. ಸಾಲಯೆಲ್ಲಾ ಮೂರು ತಿಂಗಳಲ್ಲಿ ತೀರಿಸಿಬಿಡುತ್ತೇನೆ. ನಮ್ಮಪ್ಪನ ಆಸ್ತಿ ಬಲು ದೊಡ್ಡ ಜೋಡಿ ಗ್ರಾಮವಿದೆ, ಒಂದು ಜಮೀನ್ ಮಾರಿದರೆ ನಿಮ್ಮ ಹಣ ಬಂದು ಹೋಯಿತು !

**ಶೆಟ್ರು :** ಲೇದಂಡ–ಇಂಟ್ಲೊ–ಅವ್ವಯ್ಯ ತಿಥಿ–ಖರ್ಚಿಕಿಲೇದು–ಮಾಬಾಕೀ ಅಂತಾ, ವೆಯ್ಯಿ ಐನೂರು ! ವಡ್ಡಿ ಮುನ್ನೂಟಯಾಭೈ, ಆರಣಾಲು, ಪದಿನ್ನರಕಾಸು–ಅರಕಾಸು ಮಾಕೀ, ಮಾಕಿ ಲೆಖ್ಖೇಮಿ ! ವಡ್ಡ್ಯೈನಾ ಇಸ್ತೆ ಶಾಲು,........

**ಜಯು :** ಇಲ್ಲ–ಇನ್ನೂ ಮೂರು ತಿಂಗಳು ಸುಧಾರಿಸಿ.

**ಶೆಟ್ಟಿ :** [ಸ್ವಗತ] ಕಾನಿ–ಏಮಿ ಚೇಸೇದೆ–ಭಾರಿ ಗಿರಾಕಿ–ಯಿಡ್ಲೇಕಿ ಲೇದು–ಕಟ್ಕೊಂಟೇ–ಅಸಲ್ಕೇ ಮೋಸಮೋ-ಏಮೋ- ತಿರುಪತಿ ವೆಂಕಟ್ರ ಮಣಾ–ವಡ್ಡಿಕಾಸಲೋ ನೀಕಿ ಟೆಂಕಾಯಿ–ಕರ್ಪೂರಮು ಪೂಜೆ ಚೇಪಿಸ್ತಾನಪ್ಪಾ.

[ಧಪ್‍ಪರಾಯಿ ಘೋರ್‍ಖಾನ್‍ರು ಪ್ರವೇಶಿಸುವರು]

**ಘೋರ್‍ಖಾನ್ :** [ಸ್ವಗತ] ಏ ಬಡಾಮಕ್ಷಿ-ಹೈನಾ–ಇಸ್ಕಾ ಅಮ್ಮಾ ವುನೋ ಕಬ್ಬೇ ಆಯೇತೋ-ಚಹ-ಪರೋಟಿ- ಖಿಲಾಕೊ, ಗಾನಾ ಬಜಾಕೊ, ಪೈಸೇ ಸಬಾಮ್ಯೆನೇಮೇ ಫೈಸಲ್ ಹೋಜಾತಾಕರ್ಕು— ಹಮ್ನಾ ಗಿಲೀಟ್‍ಕರ್‍ದೇತೇಹೈ-ಈವತ್ತೂ ಇಧಾದಲ್ಲಾ ಹಂ- ಇವರಪ್ಪನ್ಕೂ ಬಿಡೋಕಿಲ್ಲ. ಹಮಾರಾ ಯಜಮಾನ್ ನೈ ಸುನ್ತಾ !

**ಜಯು :** [ಸ್ವಗತ] ಸಾಲಗಾರರ ಕಾಟವೇನಪ್ಪಾ-ವಿಪರೀತ ಸಾಲವಾಗಿ ಹೋಗಿದೆ, ಯಾರ್ಯಾರಲ್ಲಿ ಎಷ್ಟೆಷ್ಟಾಗಿದೆಯೋ–ಅದೇ ನನಗೆ ಮಂದಟ್ಟಿಲ್ಲಾ. ಬೆಳಗಿನಿಂದ ನಾಲ್ಕೈದು ಜನರು ಬಂದಿದ್ದರು. ಅವರು ಹೇಳಿದಂತೆ ನೋಡಿದರೆ ಮೊತ್ತ ಮೂರು ಸಾವಿರ ರೂಪಾಯಿಗಳಾದಂತಿದೆ.

ಮೂರು ತಿಂಗಳಿಗಿಷ್ಟು ಖರ್ಚಾಗಿದ್ದರೆ ಮುಂದೆ ಗತಿಯೇನೋ— ಕಾಣೆ; ಸುಲೋಚನೆಯು ಹೇಳಿದಂತೆ ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತಾ ಈ ದುರವಸ್ಥೆಯಾಯಿತು-ಇನ್ನಾದರೂ ಬುದ್ಧಿ ಕಲಿಯಬೇಕು. 'ಬನ್ನಿ-ಬನ್ನಿ-ನವಾಬರೇ.'

**ಘೋರ್ ಖಾನ್ :** ಕಾ ಸಾಮೀ ಬಾಕಿ ಲಾವ್.

**ಜಯು :** ಈ ದಿನ 'Bank'ಗೆ ರಜಾ—'No Bank'—ಇಲ್ಲ. [ಕೈಯಾಡಿಸುವನು.]

**ಘೋರ್ ಖಾನ್ :** ಹಮ್ಕೂ ಗೊತ್ತಾಗೋಕಿಲ್ಲಾ. ಪೈಸೆ ಲಾವ್ ಸತಾಯೇತೋ ಗೊತ್ತಿಲ್ಲಾ ?—ಗರಂ ಹೋಜಾತಾ ಮೈ.

**ಜಯು :** ಕೊಂಚ ಸುಧಾರಿಸಿ. ಇದನ್ನು ಕುಡಿದು ನೋಡಿ ಯೆಷ್ಟು ರುಚಿಯಾಗಿದೆಯೋ—ಪಾಪ ಗಂಟಲಾರಿಹೋಗಿದೆ. [ಬ್ರಾಂದಿಹಾಕಿ ಗ್ಲಾಸನ್ನು ಕೈಗೆ ಕೊಡುವನು.]

**ಘೋರ್ ಖಾನ್ :** ದುಡ್ಡು-ದುಡ್ಡು ಹಂ ಪಾಪಾ, ಪುಣ್ಯಂ ನೈ-ನೈ. ಅಮ್ಮಾ ಕಾ ?

**ಜಯು :** ಮನೆಯಲ್ಲಿಲ್ಲಾ.

**ಘೋರ್ ಖಾನ್ :** [ಕುಡಿದು ಮೂತಿ ವರಸಿಕೊಳ್ಳುತ್ತಾ] ಬಹುತ್ ಅಚ್ಛಾ ಇಧಾದೆ ಸ್ವಾಮೀ. ತಮ್ಕೂ ಇದು ಕಾ ಲೇಕರ್ ಆತೇ ಸಾಮೀ. ಹಮ್ಕೂ ಅಂಗ್ಡೀಲಿ, ಸುವ್ವರ್ ದುಡು ತೊಕೊಂಡೀ, ಆಚ್ಛಾ ಇರೋದೂ ಕೊಡೋಲ್ಲ.

**ಜಯು :** ಇದು ಇಲ್ಲಿಯದಲ್ಲಾ 'London'ನ್ನಿಂದೀಗ ಜಹಜಿಳಿದು ಬಂದಿದೆ. ಈ ಚುಟ್ಟಾವನ್ನೂ ಹತ್ತಿಸಿ ನೋಡಿ.

[ಸೇದಿಸೇದಿ ತಲೆತಿರುಗಿಸುತ್ತಾ ಕೆಳಗುರುಳುವನು.]

**ಜಯು :** ನಂಜಾ ಹೊರಗೆಳೆದು ಹಾಕೋ ಇವನ್ನ.

**ನಂಜ :** [ತಲೆ ಚಚ್ಚಿಕೊಂಡು, ಎಳೆದು ಹಾಕುವನು]

## ಸ್ಥಾನ ೪.

[ಸುಂದರಾಬಾಯಿಯ ಮನೆ, ಅನೇಕ ದೇಶಸೇವಕರ ಪಠಗಳು—ಅದರಲ್ಲಿ ದೊಡ್ಡ ಗಾಂಧಿ ಪಠವು ಮಧ್ಯದಲ್ಲಿಡಲ್ಪಟ್ಟಿದೆ. ಗೋವಿಂದರಾಯರು ಕೂತು ರಾಟೆ ನೂಲುತಿರುವರು.]

**ಗೋವಿಂದರಾವ್** : ಸುಂದರಾ! ಸುಲೋಚನೆಯು ತನ್ನ ಸ್ವೇಚ್ಛಾ ಸಂಸಾರವನ್ನು ಹೂಡಿ ಮೂರು ತಿಂಗಳಾಯಿತು. ಇಂದಿರೆಯು ಸೇರಿದಂದಿನಿಂದ ಕೊಳೆಯುವ ನಾರಿಗೆ ಪಾತಿ ಕಟ್ಟಿ ನೀರು ಹಾಕಿ ದಂತಾಯಿತು. ಕೊಳೆತ ನಾತವು ಪ್ರಪಂಚವೆಲ್ಲಾ ತುಂಬಿದೆ. ಯಾವ ಮೂಲೆಯಲ್ಲಿ ಕೇಳಿದರೂ ಯೆಲ್ಲರೂ ಇವರ ಚರಿತ್ರೆಯನ್ನೇ ಪಠಿಸುತ್ತಿದಾರೆ. ಬಹಳ ಹಾಸ್ಯವಾಗಿದೆ.

**ಸುಂದರಮ್ಮ** : ಅದೇನಾಯಿತು?—ನಾನು ಮೊದಲೇ ಎಚ್ಚರಿಸಿದ್ದೆ.

**ಗೋವಿಂದರಾವ್** : ಮನ್ನೆ ಸ್ಕೂಲಿನಲ್ಲಿ ವಸೂಲಾದ ಸಾವಿರದೈನೂರು ರೂಪಾಯಿಗಳಷ್ಟು ಹಣವು ಈತನಲ್ಲಿಯೇ ಇತ್ತಂತೆ. ಈ ಹಣವೆಲ್ಲವೂ ತಮ್ಮ ಮಿತ್ರವೃಂದಕ್ಕೆ ಮನದಣಿಸುವಂತೆ ಹಬ್ಬಮಾಡಿಸಿ ಸುಲೋಚನೆಯು ಖ್ಯಾತಿವಂತಳಾದಳು. ಸರಕಾರಕ್ಕೆ ಹಣಪಾವತಿಯಾಗದುದರಿಂದ ಅವರಿಗನುಮಾನ ಬಂದು ಈತನಿಗೆ ಸಂಬಳವನ್ನೂ ಕೊಡಲಿಲ್ಲ. ಕೆಲಸ ಹೋಗೇ ಹೋಯಿತೆಂದರು. ಅಲ್ಲದೆ ಮನೆಯುಕೂಡ ಜಪ್ತಿಮಾಡ ಬೇಕೆಂದಿದಾರೆಯೆಂದೂ ಕೇಳಿದೆ.

**ಸುಂದರಮ್ಮ** : ಅಯ್ಯೋ! ದೇವರೆ! ಇದೇಕಿಷ್ಟು ಪ್ರಮಾದವಾಯಿತು? ಪಾಪ! ಸಾಲವು ಬಹುವಾಗಿರಬಹುದು. ನಾವಂತೂ ಯಾರಿಗೂ ಸಹಾಯ ಮಾಡುವಂತಿಲ್ಲವಲ್ಲಾ. ಯಾವ ರೀತಿಯಲ್ಲಾದರೂ ನಿಮ್ಮ ಕೈಲಾಗುವುದಿದ್ದರೆ ಆ ಕಷ್ಟ ನೀಗಿಸಿ ಬನ್ನಿ.

**ಗೋವಿಂದರಾವ್** : ಆ ನೀಚ ಸಂಸಾರಕ್ಕೆ ನಾನು ಹಿತಚಿಂತಕನಾಗುವೆನೇ ? ಈಗ ನಾನು ಒಂದು ಮಾತನಾಡಿದರೆ ಸಾವಿರಾರು ರೂಪಾಯಿಗಳನ್ನು ಕೊಡಲು ಸಿದ್ಧರಿದ್ದಾರೆ. ನಮ್ಮ ಜೀವನವು ಬಹು ಸಾಧಾರಣವಾದುದಾದರೂ, ಪವಿತ್ರ ಶಿಲೆಗಳಿಂದ ಕಟ್ಟಲ್ಪಟ್ಟು ನಿನ್ನಂಥಹ ಲಕ್ಷ್ಮಿಯನ್ನೊಳಗೊಂಡಿರುವುದರಿಂದ ಕುಲಕ್ಕೆ ಗೌರವವೂ, ನೆರೆಹೊರೆಯವರಲ್ಲಿ ನಂಬಿಕೆಯೂ ಉಂಟಾಗಿದೆ.

**ಸುಂದರಮ್ಮ** : ಹೇಗಾದರೂ ಆಗಲಿ. ಕೆಟ್ಟವರನ್ನು ಕೈಹಿಡಿದೆತ್ತುವುದು ನಮ್ಮ ಮೇಲಿನ ಕರ್ತವ್ಯವಲ್ಲವೇ ? ಇಂದು ಅವರು ನಮ್ಮನ್ನು ಧಿಕ್ಕರಿಸಿದರೂ ಉಪಕಾರಮಾಡುವುದು ನಮ್ಮ ಕರ್ತವ್ಯ. ನೀವು ಮೊದಲು ಹೋಗಿ ಅವರ ಯೋಗಕ್ಷೇಮವನ್ನು ನೋಡಿ ಬಂದು ಹೇಳುವವರೆಗೂ ನನಗೆ ನೆಮ್ಮದಿಯಾಗದು.

**ಗೋವಿಂದರಾವ್** : ನೀನು ಕ್ಷಮಾದೇವತೆಯು. ನಿನ್ನಲ್ಲಿನ ಶಾಂತಿ, ವಿವೇಚನೆ, ಚಿತ್ತಸ್ಥೈರ್ಯ–ನೈರ್ಮಲ್ಯತೆಯು ನನ್ನಲ್ಲಿಲ್ಲದಿತ್ತು—ಕ್ರೋಧಾವೇಶನಾಗಿದ್ದೆ. ನನ್ನ ಕರ್ತವ್ಯವನ್ನು ನನಗೆ ತಿಳಿಸಿ, ಮುಕ್ತಿಮಾರ್ಗಕ್ಕೆಳೆದೆ. ನಾನಿನ್ನು ಸುಮ್ಮನೆ ಕೂತರೆ ದೇವರು ಮೆಚ್ಚನು. ನಾನು ಹೋಗಿ ಬರುವೆನು............

## ಸ್ಥಾನ ೫.

[ಮಾರನೂ, ನಂಜನೂ ಹೆಂಡ ಕುಡಿದು ಕಣ್ಣುಗಳು ಕೆಂಪಗೆ ಮಾಡಿಕೊಂಡು, ಎಡ ಬಲಗಳಿಂದ ಪ್ರವೇಶಿಸುವರು.]

**ಮಾರ** ; ಕುಡಿದರೇ ಕುಡೀಬೇಕ್ರೀ ಪರದೇಶೀ ಹೆಂಡಾ ! ನಮ್ದೇಶದ್ದು ಲಾಯಕ್ಕಿಲ್ಲ, ಊ–ಹು–ನಮ್ಗೂ ಮಿಾಲೂ ಸಾರಾಯಿಲ್ಲಾ, ಗಿಡ್ದಲ್ಲೂ ಎಂಡಾ ರುಚಿ–ಇಲ್ಲ–ಜನ್ರಂತೂ ಕೇಳ್ಬೇ ಬೇಡಿ. ಉಫ್ ಅಂದ್ರೆ–ಎಂಡ ದ್ಮೇಗಿೞ ಬುರಗ್ನಾಂಗೆ ! ಆರೋಗ್ತಾರೆ.

**ನಂಜ:** ನೀನ್ಹೆಲು ಗಟ್ಟಿ ಕಣೋ!

**ಮಾರ:** ಏನೋ, ಆಸಲ್ದೆ! ಅಪ್ನೋರೊಂದ್ಬಾಟ್ಲಿ ಕುಡಿದ್ರೆ ನಾನಾಲ್ಕು, ಬಾಟ್ಲೀನಾ ಕೈಲ್ಹಿಡ್ಕೊಂಡ್ರೆ ಪಾತಾಳ-ತುಟಿಗೆ ತಗಲ್ಸಿದ್ರೆ! ಮರ್ತ್ಯ-ಕುಡಿದ್ರೆ! ಸ್ವರ್ಗನೇ!! ಅ! ಹ! ಹ!—ಏನ್ಮಜಾ-ಏನ್ಸೋಕು! ನಿಮ್ಗೆಲ್ಲಾ ಏನ್ಗೊತ್ತು!

**ನಂಜ:** ನಮ್ಮಪ್ಪಾ-ಕುಡೀತಿರ್ಲಿಲ್ಲಾ ಕಣೋ-ನಿಮ್ದೋ?

**ಮಾರ:** ಹೌದ್ಕಣೋ-ನಮ್ತಾತ-ಅಪ್ಪಾವ್ರಕಾಲನೇ-ಬೇರೆ-ಅವ್ರೆಲ್ಲಾ ಒರಟು, ಒಡ್ರು! ನಮ್ಹಾಗೆ ಮಸಾಲ್ದೋಸೆ, ಕಾಪಿ, ತಿಂತಿದ್ರೇನೋ!

**ನಂಜ:** ತಂಗ್ಳಿಟ್ಟಿಂದ್ರೆ-ಒಬ್ಬಟ್ಟಿಂದ್ಹಾಂಗೆ! ಪಾಪ! ನನ್ಗಂತೂ-ಎಂಡ ಇಲ್ದಿದ್ರೆ! ಮೈ ಗರಂ ಆಗೇ ಇರೋಕಿಲ್ಲಾ! ಸತ್ಹೆಣ್ದಂಗೆ-ಕೈಕಾಲ್ತಣ್ಗಾಗ್ಹೋತೆ!

**ಮಾರ:** ಹೆಂಡ ಕುಡ್ದು ಎಂಡ್ತೀನ್ಮಾತಾಡಿಸ್ಬೇಕೋ! ಅದೇ-ಸೋಕು!-ನಿಸಾ ಏಕ್ಕಿರೋವಾಗ! ಪಕ್ಕಾಗೆ ಕೂಡಿಸ್ಕೊಣ್ಣಿ! ಮೇಲ್ಹೀಗೆ-ಕೈ ಹಾಕಿದ್ರೆ! [ಎಂದು ನಂಜನ್ಮೇಲೆ ಕೈ ಹಾಕಿ ತಬ್ಬಿಕೊಳ್ಳಲು ಹೋಗುವನು]

**ನಂಜ:** ತಲೆತಿರುಗ್ತದೇನೋ! ಮುಂಡ್ಮಗ್ನೇ! ಬಿಟ್ಟೆ ಬಾಟ್ಲಿ ಹೊಡ್ದು! ಬೀದೀಲಿ ಮಾನಾ ಕಳೀತೀಯೇನೋ? [ಒಬ್ಬರಿಗೊಬ್ಬರು ಕಾದಾಡಿ ಇಬ್ಬರೂ ಬಿದ್ದು ಹೋಗುವರು.]

[ಸತ್ಯುವು ತಖಲಿಯಾಡಿಸುತ್ತಾ ಓಡಿಬರುವನು.]

**ಸತ್ಯು:** [ಅವರ ಕಡೆ ನೋಡಿ] ಹೆಂಡ ಕುಡಿದು ಬಿದ್ದಿರುವಂತೆ ಕಾಣುತ್ತೆ! ಕುಡಿತದಿಂದ ಬಹು ಜನರು ಕೆಟ್ಟರೆಂದು ಅಮ್ಮ ಅನೇಕ ಸಾರಿ ಹೇಳುತ್ತಿದ್ದನ್ನು ಕೇಳಿದ್ದೆ-ಇವರ ಸ್ಥಿತಿ ಕಂಡರೆ-ಇವರೂ ಅದೇ ಗತಿಯಾಗಿರಬೇಕು-ಮೂಢರು! ತಿಳಿದು ತಿಳಿದೂ-ಏಕೆ! ಹಳ್ಳಕ್ಕೆ ಬೀಳುವರು? ಹೆಂಡಾ-ಕಾಫೀ-ಟೀಗಳು ಕುಡಿಯದಿದ್ದರಾಗದೇ?-ನಿರ್ಮಲ ಜಲಪಾನ

ವಿಸಹ ಬೇರೊಂದನ್ನೂ ಸೇವಿಸದ ನನ್ನ ವೈಯು ಕುಂದಿರುವುದೇ [ತೊಡೆತಟ್ಟುವನು] ಅಜ್ಞಾನಿಗಳು ! [ಯೋಚಿಸಿ] ನಾನೇಕೆ ಇವರನ್ನೆಬ್ಬಿಸಿ ಎರಡು ಬುದ್ಧಿಯ ಮಾತಾಡಬಾರದು ? [ಅಲುಗಿಸಿ ಎಬ್ಬಿಸುವನು]

**ಮಾರಾ:** ನಾನೆಲ್ಲಿದ್ದೇಸ್ಕಣೋ-ಸಂಜಾ ! ಏನೋ ಗುಪ್ಪಾಟ್ಗತ ಬಡೀತ ದಲ್ಲೊ !! ಹಾಳು.

**ಸತ್ಯ:** ಮೂರ್ಖರಿರಾ ನಿಮ್ಮ ಕೈಲಿನ ಕೊಡಲಿಯಿಂದಲೇ ನಿಮ್ಮ ಕುತ್ತಿಗೆ ಯನ್ನು ಕೊಯ್ದು ಕೊಳ್ಳುವಿರಾ ? ಗಂಟಲವರಿಗೂ ಕುಡಿದು ಕೊಚ್ಚೆ ಯಲ್ಲಿ ಹೊರಳುತ್ತಿರುವಿರಿ ! ನಿಷಾನೇವಿಯ ಪ್ರಸಾದ! ಆಗಲಿ ನಾನೀಗ ಲೇಹೋಗಿ ನಿಮ್ಮ ಧಣಿಗಳಿಗೆ ತಿಳಿಸುವೆನು [ಓಡುವಂತೆ ನಟಿಸುವನು]

**ನಂಜ:** ಎನ್ನೊಡ್ಯಾ ! ಇನ್ಮೇಲ್ಕುಡಿಯೋಕಿಲ್ಲಪ್ಪಾ !

**ಮಾರ:** [ಹುಡುಗನ ಕಾಲುಗಳನ್ನು ಹಿಡಿದುಕೊಂಡು] ನನ್ಪಾಯಲ್ಕಲ್ಹಾಕ್ಬೇಡ-ಧೊರೇ : ಕಾಲಿಗ್ಬೀಳ್ತೀವಿ ! ಅಪ್ರಾಣೆಗೂ ಕುಡಿಯೋದ್ಬಿಡ್ತೀನಪ್ಪಾ.

**ಸತ್ಯ:** ಸುಳ್ಳುಹೇಳಿ ನನಗೆ ಮರುಳು ಮಾಡುವಿರಾ?

**ನಂಜ:** ಮಾರೆಮ್ಮನಾಣೆಗೂ ಬಿಡ್ತೇವಪ್ಪಾ, ಗನೀ ಹಾಗ್ಬೇಡಾ ಬಾಯಾಕ್ಕ [ನಮ್ರತೆಯಿಂದ ಬೇಡುವರು.]

**ಸತ್ಯ:** ಹಾಗಾದರೆ—[ತಾನು ಹಾಕಿಕೊಂಡಿದ್ದ ಮಹಾತ್ಮರ ಚಿತ್ರವಿದ್ದ 'ಲಾಕೆಟ್'ನ್ನು ತೆಗೆದು ಅವರ ತಲೆಯ ಮೇಲಿಟ್ಟು] ಈ ಮಹಾತ್ಮರನ್ನು ತಲೆಯ ಮೇಲಿಟ್ಟು ಕೊಂಡು ಪ್ರಮಾಣಮಾಡಿ, ಬಿಟ್ಬಿಡ್ತೇನೆ.

**ಇಬ್ಬರೂ:** ನಮಗೀ ಮಾರಾಯರು ತಿಳೋದು ಬುದ್ದೀ. ಹೆಂಗಸ್ರು ಕಾಲ್ಕಾಲಿಗ್ಬಿದ್ದು ಕುಡೀಬೇಡೀ ಅಂತ ಕೇಳ್ಕೊಂಡ್ರು, ಮಂಕ್ಮಂಡೇ ಮಕ್ಕಳು ಬಿಡ್ಲಿಲ್ಲ ! ಇವರ್ಪಾದ್ದಾಣೆ ಇನ್ಮೇಲ್ಕುಡೀಯೋಕಿಲ್ಲಪ್ಪಾ !

[ಮಾಧವನು ಹಣದ ಚೀಲವನ್ನೆತ್ತಿಕೊಂಡು ಬಂದು ನಿಂತು ಹುಡುಗನ ಚತುರತೆಗೆ ಆಶ್ಚರ್ಯನಾಗಿ ನಿಂತು ನೋಡುತ್ತಿರುವನು.]

**ಮಾಧು:** [ಹತ್ತಿರಕ್ಕೆ ಬಂದು ಮುದ್ದಿನಿಂದ] ಮಗೂ ನಿನ್ನನ್ನು ಪಡೆದ ಪುಣ್ಯವಂತರ್‍ಯಾರಪ್ಪಾ, ನಿನ್ನ ಹೆಸರೇನು ಹೇಳುವಿಯಾ!

**ಸತ್ಯು:** ಗೋವಿಂದರಾಯರ ಮಗ ನಾನು, ನನ್ನ ಹೆಸರು [ಶೀವಿಯಿಂದ] 'ಸತ್ಯು'

**ಮಾಧು;** ಅದೆಂತಹ ಸತ್ಪುರುಷರವರು! ಸತ್ಯವೀರನಾದ ನಿನ್ನನ್ನು ಪಡೆದವರು! ಈಗಿನಿಂದಲೇ ನಿನ್ನ ಮಹತ್ವವು ಮೂರ್ತಿಗೊಂಡು ಪ್ರಜ್ವಲಿಸುತ್ತಿದೆ.

**ನಂಜ:** ಮೊತ್ಕೊಟ್ಮೇಲೆ ಪ್ರಾಣ ಹೋದ್ರೂ ತಪ್ಪೋಕಿಲ್ಲಾ ಬುದ್ಧೀ ಕುಡಿತದಿಂದ ನನ್ಮನೇ ಹಾಳಾಗ್ಹೋಯ್ತು. ಈ ಅಪ್ನೋರು ಮನುಷ್ಯರಲ್ಲಾ ಬುದ್ಧೀ, ನಮ್ಮ ಪಾಲಿಗೆ ದೇವರು! [ಕಾಲಿಗೆ ಬೀಳುವನು.]

**ಸತ್ಯು:** ಇನ್ನು ಹೊರಡಿ; ಹೆಂಡಕ್ಕೆ ಹಾಕುತ್ತಿದ್ದ ಹಣವನ್ನು ನಿಮ್ಮ ಹೆಂಡಿರ ಕೈಲೇ ಕೊಡಿ, ನಿಮ್ಮನ್ನು ಆದರದಿಂದ ಸಾಕುವಳು.

**ಮಾರ:** ಅದ್ರಂತೇ ಆಗ್ಲಿ ಬುದ್ಧೀ, ನನ್ಕೈಲಿ ಕಾಸ್ನಿಲ್ಲೋಕಿಲ್ಲಾ! ಒಳ್ಳೇ ಉಪಾಯ!

[ಸತ್ಯುವು ಓಡುವನು; ನಂಜ, ಮಾರನೂ ಹಿಂಬಾಲಿಸುವರು.]

**ಮಾಧು:** ದೈವಾಂಶಪುರುಷ! ಈ ಸತ್ಯಮಾತೆಯಲ್ಲಿ ಇನ್ನೂ ಎಂತೆಂತಹ ಮಹಾತ್ಮರಿರುವರೋ ಅವರಿಗೆ ನನ್ನ ನಮಸ್ಕಾರವು. ಪ್ರಕೃತ ನಾನು ಒಂದು ಕೆಟ್ಟ ಸಮಾಚಾರ ಕೇಳಬಂದೆ, ಬಹು ಚೆನ್ನಾಗಾಯಿತು. ಜಯಕುಮಾರರ ಗತಿ :—

ಲೋಕದಲ್ಲಿ ಮನುಷ್ಯನು ಬಹು ಎಚ್ಚರಿಕೆಯಿಂದಿರಬೇಕು. ವಿದ್ಯಾ ಧನ ಮದಗಳಿಂದ ಮನಬಂದಂತೆ ಮೆರೆಯಬಾರದು. ಸಂಬಂಧ ಬೆಳೆಸುವುದಕ್ಕೂ ಉಚಿತಾನುಚಿತಗಳ ಸ್ಮರಣೆ ಇಲ್ಲದಿದ್ದರೆ, ಕೇಡೆಣಿಸದೆ ಸಾಕಿದ ಘಟಸರ್ಪದಂತೆ ಪರಿಣಮಿಸಿ ಮುಂದೆ ಅದರಿಂದಾಗುವ ದುಷ್ಫಲಗಳಿಗೆ

ಸೊಂದುಕೊಳ್ಳಬೇಕಾಗುವುದು. ನೀತಿ ಬಿಟ್ಟು ದುರಾಚಾರ ಪದ್ಧತಿಗಳನ್ನನುಸರಿಸಿ ಧರ್ಮಬಾಹಿರನಾದವನ ಬಾಳೆಂತು ಸುಖಿಸೀತು? ಜಯು ಈಗ ಬಹು ಕಷ್ಟಕ್ಕೆ ಸಿಲುಕಿರುವನು. ಸರಕಾರದ ಹಣತಿಂದರೆ ಸುಮ್ಮನೆ ಬಿಡುವರೆ? ಜೈಲಾಗುವದೋ ಕಾಣೆ, ಈಗಲೇ ಈ ಹಣವನ್ನವನಿಗೆ ಕೊಟ್ಟು, ಇಂದಿನ ಆಪತ್ತನ್ನು ಹರಿಸಿಕೊಳ್ಳುವಂತಾದರೆ ಮುಂದೆ ಋಣಮುಕ್ತನಾಗಲು ಯತ್ನಿಸಬಹುದು. ಈಗಲೇ ಅಲ್ಲಿಗೆ ಹೋಗುವೆನು. ತಡಮಾಡಿದರೆ ಸನ್ನಿವೇಶವು ವಿಪರೀತವಾಗಬಹುದು!

**ಗೋವಿಂದರಾವ್ :** (ತಾನೂ ಹಣ ಸರಿಪಡಿಸಿಕೊಂಡು ಬಂದು, ಮಾಧವನ ಮಾತನ್ನು ಕೇಳುತ್ತಿರುವನು) ಇದೇನು ವಿಚಿತ್ರ? ಇವರೆಂತಹ ಸತ್ಪುರುಷರು. ಪವಿತ್ರ ಪ್ರೇಮದ ಪರಮಾವಧಿ ಹೊಂದಿದ ಸ್ನೇಹಿತರು! ನಾನೂ ಈ ಗುಣವಂತನ ಸ್ನೇಹವನ್ನು ಮಾಡಿಕೊಳ್ಳಲಿಚ್ಛಿಸುವೆನು. (ಮುಂದೆ ಬಂದು) ತಾವು ಯಾರು? ಎಲ್ಲಿಯವರು? ಯಾವ ಉದ್ದೇಶ್ಯದಿಂದ ಹೊರಟಿರುವಿರಿ?

**ಮಾಧು :** ನನ್ನ ಅಣ್ಣನು ಕೆಲವು ಅಸಂಗತ ಕಾರ್ಯಗಳಿಂದ ಋಣಗಾರನಾಗಿ ಕಷ್ಟಕ್ಕೆ ಸಿಲುಕಿರುವನು. ಆತನಿಗೆ ಈ ಹಣವನ್ನು ಕೊಟ್ಟು ಬರಲು ಹೋಗುತ್ತಿರುವೆನು. ತಾವು ಯಾರು?

**ಗೋವಿಂದರಾವ್ :** ನಾನೂ ಕೂಡ ನಿಮ್ಮಣ್ಣ ಜಯಕುಮಾರರ ವಿಚಾರಣೆಗಾಗಿಯೇ ಹೋಗುತ್ತಿರುವೆನು. ನಾನೂ ಸಾವಿರದೈನೂರು ರೂಪಾಯಿಗಳನ್ನು ಸರಿಪಡಿಸಿರುವೆನು. ಇದನ್ನು ಈಗಿನ ಸಂದರ್ಭಕ್ಕೆ ಉಪಯೋಗಿಸಿದರೆ ಮೇಲು ಆದರೆ ನೀವೂ ಧನ ತಂದಿರುವುದಾಶ್ಚರ್ಯವೆ. ಆಗಲಿ, ಅಧಿಕಸ್ಯ ಅಧಿಕಂ ಫಲಂ, ಇದರಿಂದ ಬಹುಮಟ್ಟಿಗೆ ಆತನ ಸಾಲ ತೀರಬಹುದು.

**ಮಾಧು :** ಬಹು ಸಂತೋಷ. ನಿಮ್ಮಂಥ ಸಮಾಜ ಸೇವಕರನ್ನು ನಾನರಿಯೆನು. ಜಯುವನ್ನು ಸಂಸಾರಿಯನ್ನಾಗಿ ಮಾಡಿದರೆ ತಮಗೆ ಬಹು ಪುಣ್ಯ ಬರುವುದು. ನಾನೂ ನೆರವಾಗುವೆನು.

**ಗೋವಿಂದರಾವ್ :** ಬನ್ನಿ ಹೋಗಿ ಬರೋಣ [ಹೋಗುವರು]

# ಅಂಕ ೪.

## ಸ್ಥಾನ ೧.

[ಬಹು ದುಃಖ ಪಡುತ್ತಾ ಜಯುವು ಒಂದು ಮೇಜಿನಮುಂದೆ ಕುಳಿತಿರುವನು]

**ಜಯು :** [ಸ್ವಗತ] ಜಯು ! ಇಂದು ನಿನಗೆ ಜಯದಿನವು !! ಅಂದು ? ಹಣ ದುಂದುಮಾಡಿ ಭ್ರಷ್ಟಸಂಗದೊಡನೆ ಭೋಗಿಸಿದಂದು ?....ಹೇಗಿತ್ತು ?.... ಪರಮ ಸಂತೋಷ, ಭೂ-ಸಗ್ಗ ಸುಖ !!! ಈಗ-ಇಂದು-ಆ-ಸ್ನೇಹಿತರಿಂದೇಕೆ ನಿನ್ನ ಕಷ್ಟನೀಗಲಿಲ್ಲ ? ನೀಗುವುದಿಲ್ಲ ?........ಎಲ್ಲೆಲ್ಲಿಯೂ ನನ್ನ ಚರಿತಾಶ್ರವಣವೇ ! ಎಲ್ಲರೂ ಥೂ ಎಂದು ಧೂಳೆರಚುತ್ತಿರುವರು. ಈ ಹಾಳು ಬಾಳಿನಿಂದೇನು ಫಲ ?

ಇದಕ್ಕೆ ಕಾರಣನ್ಯಾರು ? ನಾನೇ ಅಲ್ಲವೇ ? ಸತ್ಯದ ತಿರುಳರಿಯದೆ, ಪೊಳ್ಳು ವಿನೋದಗಳಲ್ಲಿ ಮಗ್ನರಾಗಿ-ಕಣ್ಣುಕಾಣದೆ-ಸತಿಪತಿಯರಿಬ್ಬರೂ ಕುಣಿಯುತ್ತಿರುವೆವಲ್ಲವೇ ? ಇದು ಶಾಶ್ವತವೇ ? ಇಂದೇ ತಿಳಿದು ಹೋಯಿತು—ಒಂದು ರಾತ್ರಿಯಲ್ಲಿ ಎರಡು ಸಾವಿರ ರೂಪಾಯಿ ಪೋಲುಮಾಡಿದೆ. ಸಮಯಕ್ಕೆಂದರೆ ಸಾವಿರದೈನೂರು ರೂಪಾಯಿ ವದಗಲಿಲ್ಲ ! ಬೇಡ-ಬೇಡ.ಈ ಹಾಳುಬಾಳು ಇಲ್ಲಿಗೆ ಮುಗಿಯಲಿ. ನನ್ನ ಸತಿಗೆ ನಾನು ಬೋಧಿಸಿದರೆ ಅವಳು ಕಿವಿಗೊಡುವಂತಿಲ್ಲ—ಏನು ಮಾಡಬಲ್ಲೆ ?-

ನಾನೊಬ್ಬ ಪರದೇಶದಿಂದ ಬಂದ ಪಂಡಿತ—ಬಹು ಮರ್ಯಾದಸ್ಥ. ಹೊರಗೆ--ಕಾಲುನಡಗೆಯಿಂದ ನಡೆದುಹೋಗಲಾಗದು--ಹೀಗಿದ್ದವನು ಇನ್ನೊಂದೇ ಘಂಟೆಯಲ್ಲಿ-ಕಳ್ಳ....ಉಪ್ಪಿಟ್ಟ ಮನೆಗೆ, ಕನ್ನವಿಟ್ಟ ಕೇಡಿಗ ! ಈ ನಾಯಿಗೆ ಬೇಡಿಹಾಕಿ ಎಳೆದೊಯ್ಯಲು, ಇಬ್ಬರು ದೂತರು-ಸಾಲದೇ ? [ನಿಟ್ಟುಸಿರುಬಿಟ್ಟು, ಅತಿಶೋಕದಿಂದ] ದಿಕ್ಕುಕಾಣದಾದೆ ! ಯಾವ ರೀತಿಯಲ್ಲಿ

ನನ್ನ ಮಾನವನ್ನುಳಿಸಿಕೊಳ್ಳಲಿ? ಯಾವ ಉಪಾಯವೂ ಇಲ್ಲದಾಗಿದೆ. ನೆರೆಹೊರೆಯವರ್‍ಯಾರೂ ಸಹಾಯಕರಿಲ್ಲ, ಆಪ್ತಬಂಧುಗಳಿಲ್ಲ, ಮಿತ್ರವರ್ಗದವರಿಲ್ಲ, ಯಾರನ್ನು ಮೊರೆಹೊಗಲಿ? ಯಾರನ್ನು ಬೇಡಲಿ? ಏನು ಮಾಡಲಿ? ನನ್ನನ್ನೀ ದುರ್ಗತಿಗೆ ತಂದ ಆ ನೀಚ ಸುಲೋಚನೆಯನ್ನೇನು ಮಾಡಲಿ? ಮೊಸಳೆ ಬಾಯಲ್ಲಿ ಸಿಕ್ಕಿದಂತಾಗಿದೆ. ಮಾತನಾಡಲು ಆಕೆಯ ಸಾಲವೊಂದಿದೆ. ಅಪರಿಮಿತಋಣ....ನಾನೀ ಜನ್ಮದಲ್ಲಿ ಋಣ ಮುಕ್ತನಾಗಲಾರೆ. [ಯೋಚಿಸಿ] ಹೌದು. ಅದೊಂದೇ ಉಪಾಯವು. ಋಣಪ್ರಪಂಚಕ್ಕೆ ನನ್ನ ದೇಹವನ್ನಾಹುತಿಯಾಗಿಕೊಟ್ಟು-ಆತ್ಮವನ್ನಾದರೂ ಪವಿತ್ರಗೊಳಿಸುವುದೊಂದೇ ಉಪಾಯ

[ತನ್ನಲ್ಲಿದ್ದ ತುಪಾಕಿಯನ್ನು ಬಾರುಮಾಡಿ-ಒಂದು ಸಲ ಪರೀಕ್ಷಿಸುವನು]

**ಸುಲೋಚನೆ:** [ಓಡಿಬಂದು] ಇದೇನು ಗದ್ದಲ? [ನಿಂತುಬಿಡುವಳು]

**ಜಯು:** ಸುಲೋಚನೆ! ನಿನ್ನ ಸಂಸಾರ ನಡಿಸಿ ಈ ಗತಿಗೆ ಬಂದಿರುವೆನು. ಒಂದೊಂದು ಸಾಲವೂ ನನ್ನ ಹೃದಯದಲ್ಲಿ ವಿಷಬಾಣದಂತೆ ನಾಟಿ ನೋಯುತ್ತಿರುವುದು. ಅದರ ಜೊತೆಗೆ ನಿನ್ನ ಋಣವೊಂದಿದೆ ನಾನೀ ಭಾರ ಹೊರಲಾರೆ. ಇವೆಲ್ಲಕ್ಕೂ ಸಮತೂಗುವ ಈ ದೇಹವನ್ನು ನಿನಗಾಗಿ ಒಪ್ಪಿಸಿರುತ್ತೇನೆ—ಸ್ವೀಕರಿಸು................

[ಮಾಧೂ, ಗೋವಿಂದರಾಯನೂ ಹಣವೆತ್ತಿಕೊಂಡು ಪ್ರವೇಶಿಸಿ]

**ಮಾಧು:** (ಓಡಿಹೋಗಿ ಕೈ ಹಿಡಿದುಕೊಂಡು) ಇದೇನು ಪ್ರಮಾದ! ತಡೆ-ತಡೆ ನಿನ್ನ ಬೆಲೆಯನ್ನೇ ನೀನರಿಯೆ, ಹುಚ್ಚಾ ಋಣವಿದ್ದರೆ ಹರಿಸಲು ಗಂಡುಸಾಗಿ ಹುಟ್ಟಿರುತ್ತೀ. ದೇವರು....

**ಜಯು:** ದೇವರೇ, ಅವನ್ಯಾರು?

**ಮಾಧು:** ನಿನ್ನ-ನನ್ನ ಈ ಜಗತ್ತಿಗೇ ಒಂಡವಾಳಗಾರ. ಅವನನ್ನು ಮರೆತು ನೀನಿಂತಾದೆ, ಅವನು ಕೊಟ್ಟ ಸಾಲತೀರಿಸಲು ಒಂದೇಮಾರ್ಗ.

ಸತ್ಪಥವಿಡಿದು ದುಡಿ, ನಿನ್ನ ಕಷ್ಟಕ್ಕೆ ಬಂದ ಕೂಲಿಯಿಂದ ಇಹಲೋಕದ ಸಾಲಗಾರರಿಗೆ ಕೊಟ್ಟು ಋಣಮುಕ್ತನಾಗು.

**ಜಯು** : ನಾನು ಋಣಮುಕ್ತನಾಗಲು ಸಾಧನವಿದೆಯೆ? ಸುಳ್ಳು-ಸುಳ್ಳು.

**ಮಾಧು** : ನಾನು ಹೇಳಿದಂತೆ ಕೇಳು.

**ಜಯು** : ಕೇಳುವೆನು. [ದಂಡಪ್ರಣಾಮ ಮಾಡುವನು.]

**ಮಾಧು** : ನಾವಿಬ್ಬರೂ ಸೇರಿ ಮೂರುಸಾವಿರ ರೂಪಾಯಿಗಳನ್ನು ಸರಿಮಾಡಿ ತಂದಿದ್ದೇವೆ. ಇದರಿಂದ ಇಂದಿನ ಕಷ್ಟ ನೀಗಿಸಿಕೊಂಡು ಸುಧಾರಿಸಿಕೋ; ನಿಧಾನವಾಗಿ ಮುಂದಿನ ಮಾರ್ಗವನ್ನು ಹುಡುಕುವ.

**ಜಯು** : ನನಗೆ ಬೇಡ, ಈಗಿರುವ ಹೊರೆಯೇ ಭಾರವಾಗಿಹೋಗಿದೆ. ಅದರ ಜೊತೆಗೆ ಇದನ್ನೂ ಹೊರಲಾರೆ, ಖಂಡಿತ ನನ್ನಿಂದಾಗದು, ಆಗಲಾರದು....ಆಗುವುದೇ ಇಲ್ಲ; ನನ್ನ ದೇಹವು ನನಗೆ ಬಹು ಭಾರವಾಗಿ ಹೋಗಿದೆ. ಇದರಿಂದ ತಪ್ಪಿಸಿಕೊಳ್ಳುವವರೆಗೂ ಶಾಂತಿ ಸುಖಗಳಿಲ್ಲ; ದಯವಿಟ್ಟು ತಡೆಯಬೇಡಿ.

**ಗೋವಿಂದರಾವ್** : ನಿನಗಿದು ಸಾಲವಾಗಿ ಕೊಟ್ಟು ಅದರಿಂದ ಪ್ರತಿಫಲ ಬಯಸಿ ತಂದಿಲ್ಲ. ನೀನೊಬ್ಬ ಸುಖವಾಗಿದ್ದರೆ ಹಣ ಸಂಪಾದಿಸಲು ಯೋಚನೆಯೇ? ಮಿತಿಯಿಲ್ಲದಷ್ಟು ಕೂಡಿಡುವೆ, ಹೇಡಿಯಂತೆ ಜೀವನವನ್ನು ಕೊನೆಗಾಣಿಸಿದರೆ ಯಾವ ಪುರುಷಾರ್ಥವೂ ಆಗುವುದಿಲ್ಲ.

**ಜಯು** : ವಿಚಿತ್ರ ಪ್ರಪಂಚ! ಯಾವರೀತಿಯಲ್ಲಿ ಆಡಿಸುವಿರೋ ಅದೇ ರೀತಿಯಲ್ಲಿ ಆಡುವೆನು. ಇನ್ನೂ ಈ ನೀಚದೇಹಕ್ಕೆ ಮುಕ್ತಿ ಇಲ್ಲದಿರಬಹುದು. ಕೊನೆಯವರೆಗೂ ನೋಡಿಯೇ ಬಿಡುವೆನು....ಮಹಾತ್ಮರಾದ ನೀವುಗಳ್ಯಾರು? ನನಗೂ, ತಮಗೂ ಎಲ್ಲಿಯ ಸಂಬಂಧ? ತಾವೇಕೆ ನನ್ನ ಮೇಲಿಷ್ಟು ಪುತ್ರವಾತ್ಸಲ್ಯವನ್ನು ತೋರುವಿರಿ; ದಯವಿಟ್ಟು ತಿಳಿಸಿ.

**ಮಾಧು** : ಇವರು ಈ ಊರಿನಲ್ಲಿಯೇ ಇರುವರು. ಅವರು ಜೀವಿಸುವ ರೀತಿಯು ಲೋಕಕ್ಕೇ ಆದರ್ಶಪ್ರಾಯವಾಗಿದೆ. ಗಂಡ ಹೆಂಡಿ

ರಿಬ್ಬರೂ ದಿನವೊಂದಕ್ಕೆ ಎರಡೇ ಗಂಟೆಗಳ ಕಾಲ ಚರಕ ಮಾಡಿ ಸಂಸಾರದಲ್ಲಿ ಸರ್ವ ಸುಖವನ್ನು ಅನುಭವಿಸುತ್ತಾ, ದೇವದ್ವಿಜರಲ್ಲಿ ಭಕ್ತಿಯಿಟ್ಟು, ನಿರ್ಮಲಚಿತ್ತದಿಂದ ಸಮಾಜಸೇವೆ ಮಾಡುತ್ತಿರುವ ಪರಮ ವಿಷ್ಣುಭಕ್ತರಾದ ಗೋವಿಂದರಾಯರಿವರು.

**ಜಯು :** ನಾನಿವರನ್ನು ಕೇಳಿ ಬಲ್ಲೆ—ನಮ್ಮ ಸುಲೋಚನೆಯ ಬದ್ಧ ವೈರಿಗಳಾದ ಸುಂದರಮ್ಮನವರ ಯಜಮಾನರೋ ಇವರು ?

**ಗೋವಿಂದರಾವ್ :** ಅವರು ಹಾಗೆಣಿಸಬಹುದು, ಆದರೆ, ನನ್ನ ಸತಿ ಸುಂದರಿಯು ನನ್ನ ಕರ್ತವ್ಯವನ್ನೆಚ್ಚರಿಸದಿದ್ದರೆ ನಾನಿಂದು ನಿಮ್ಮಲ್ಲಿಗೆ ಬರುತ್ತಿರಲಿಲ್ಲ.

**ಮಾಧು :** ದೈವವಶಾತ್ ಈ ಪ್ರಾಣವೊಂದು ನಿಮ್ಮಿಂದಲೇ ಉಳಿಯಿತು.

**ಜಯು :** ನಮ್ಮ ಪರಾಧವನ್ನು ದಯವಿಟ್ಟು ಕ್ಷಮಿಸಿ.

**ಗೋವಿಂದರಾವ್ :** ಇನ್ನಾದರೂ ಎಚ್ಚರಿಕೆಯಿಂದಿರಿ. ಈ ಗುಣರಹಿತರ ಕಪಟ ಮೋಹಕ್ಕೆ ಬಿರಗಾಗಿ ಪೇಚಾಡಬೇಡಿ. ದೈವಕೃಪೆಯು ನಿಮ್ಮ ಮೇಲೆ ಸಂಪೂರ್ಣವಾಗಿರಲಿ. ನಾವು ಹೋಗಿಬರುವೆವು. [ಹೋಗುವರು]

[ಸುಲೋಚನೆ ಜಯು ಮುಂದೆ ಬಂದು]

**ಜಯು :** ಯಾವ ದೇವ ದೂತರಿರುವರು ? ನನಗಿವರೇ ದೈವಸಮಾನರು, ಮಾರ್ಗದರ್ಶಕರು, ಸುಜ್ಞಾನಿಗಳು. ಇವರು ಹೇಳಿದಂತೆ ಎಚ್ಚರಿಕೆ ಯಿಲ್ಲದಿದ್ದರೆ, ಸುಳಿಗೆ ಸಿಕ್ಕಿದ ದೋಣಿಯಂತೆ ಕೊನೆಗಾಣುವೆನು. ದೈವವಶಾತ್ ಅಮೂಲ್ಯವಾದ ಜೀವವುಳಿದಿದೆ. ಉನ್ನತ ಪದವಿಗೇರುವ ಆಸೆ ತೊರೆಯೆನು.

**ಸುಲೋಚನೆ :** ಏಕೆ ಗೊಣಗುವಿರಿ ? ಅವರಿಂದೇಕೆ ಈ ಹಣ ಪಡಿದಿರಿ ? ನಿಮಗೆ ಬದಗಿರುವ ಅರ್ಥ ಸಂಕಟವಾದರೂ ಯಾವುದು ? ನಾವೆಲ್ಲವೂ ನಿಮ್ಮ ಪಾಲಿಗೆ ಪಾಪರಾಗಿ ಹೋಗಿದ್ದೇವೆಯೇ ? ಯಾರಲ್ಲಿ ಹೋಗಿ

ಕೇಳಿದರೂ ಹತ್ತಾರು ಸಾವಿರಗಳನ್ನು ತರಲು ಶಕ್ತಿಯೆನಗಿಲ್ಲ ದ್ದೋಯಿತೇ? ನಿಮ್ಮ ತಿರುಪಬುದ್ಧಿ ಯೆಲ್ಲಿಹೋಗುವುದು! ಆತನ ಹಣ ವನ್ನು ಹಿಂದಕ್ಕೆ ಕಳುಹಿಸಿರಿ. 'ಲೋ! ಮಾರಾ!'—ಏಕೆ? ನಾನೇ ಹೋಗಿ ಅವರ ಮನೆಮುಂದೆ ಎಸೆದು ಬರುವೆನು. ಮಾನ ಮರ್ಯಾದೆಗಳೆಲ್ಲವೂ ಓಡಿದವು. ತಿರುಕರನ್ನಾಗಿ ಮಾಡಿ ಅಪಮಾನ ಮಾಡುವಿರಾ?

**ಜಯು:** ಇಲ್ಲ, ಇದರಲ್ಲಿ, ಸರಕಾರಕ್ಕೀಗ ಹಣ ಹೋಗದಿದ್ದರೆ ನನ್ನ ಕೆಲಸವೇ ಹೋಗಿಬಿಡುತ್ತೆ. ನೀನು ಎಲ್ಲಿಯಾದರೂ ಹೋಗಿ ಹಣ ತರುವಷ್ಟು ಹೊತ್ತು ಕೂಡ ಇಲ್ಲ. ನೀನಿನ್ನು ಪುನಃ ಸಾಲಮಾಡ ಬೇಡ ದಯವಿಟ್ಟು ಮನೆವೆಚ್ಚ ಕಡಿಮೆಮಾಡು. ಬಂದುದರಲ್ಲಿ ಗೌರವ ದಿಂದ ಸಂಸಾರಮಾಡುವ.

**ಸುಲೋಚನೆ:** ಅದು ನನ್ನಿಂದಾಗದು ನಾನು ಮಾಡುವಂತೆ ನಿಮಗೆ ಸರಿಬಿದ್ದರೆ ನೀವಿಲ್ಲಿರಬಹುದು, ಇಲ್ಲವಾದರೆ ನನ್ನ ಸಾಲ ತೀರಿಸಿ ಮುಂದೆ ಹೊರಡಬಹುದು, ಹೂ............

**ಜಯು:** ನಾನಾಗೆನ್ನಲಿಲ್ಲ. ಆದಷ್ಟು ಕಡಮೆಮಾಡು ಇದರ ಮೇಲೆ ನಿನ್ನಿಷ್ಟ!

**ಸುಲೋಚನೆ:** ನಿಮ್ಮಿಂದ, ಚನ್ನಾಗಿ ಮರ್ಯಾದೆ ಬಂತು. ಬೀದಿಯಲ್ಲಿ ನೋಡುವವರು ನಕ್ಕಾರು. ಆ ಹಣದ ಚೀಲವನ್ನು ಇಲ್ಲಿ ಕೊಡಿ.

**ಜಯು:** ನಾನೀಹಣವನ್ನು ಕಳುಹಿಸಬೇಕು. ದಯವಿಟ್ಟು ಕೋಪಿಸ ಬೇಡ ನೀನು ತರುವ ಹಣದಲ್ಲಿ ಅವರ ಭಾಗವನ್ನು ಕಳುಹಿಸೋಣ.

**ಸುಲೋಚನೆ:** ಹಾಳಾಗಿ.

[ಬಂದು ಚೀಲವನ್ನೆತ್ತಿಕೊಂಡು ಹೊರಟು ಹೋಗುವಳು]

## ಸ್ಥಾನ ೨.

[ಮಧುರವಾಣಿ, ಶಾಂತಿಪ್ರದೆ, ಚಂಚಲೆ, ಸುಮಿತ್ರೆ ನಾಲ್ವರೂ ಭೋಜನಕ್ಕೆಂದು ಷೋಕಿನಿಂದ ಸಿಂಗರಿಸಿಕೊಂಡು ಹೊರಟಿರುವರು]

**ಮಧುರವಾಣಿ**: ಏನು ಸುಲೋಚನೆಯ ಮನೆಗೆ ತಾನೆ? ನೀವೂ?

**ಶಾಂತಿಪ್ರದೆ**: ಹೌದು ನಿಮಗೂ 'invitation' ಬಂದಿತ್ತೊ?

**ಮಧುರವಾಣಿ**: ಸಂಜನೇ ಖುದ್ದಾಗಿ ತಂದುಕೊಟ್ಟು ಹೋದ!

**ಶಾಂತಿಪ್ರದೆ**: 'Too modern and honourable way' ನವೀನ ಪದ್ಧತಿಯೇ ಇದು! ನಮ್ಮಲ್ಲಿ ಊಟಕ್ಕೆ ಕರೆಯಬೇಕೆಂದರೆ ರಸ್ತೆಯಲ್ಲೆಲ್ಲಾ 'ಪಿಳ್ಳಮೇಳ' ಊದಿಸಿಕೊಂಡು ಮನೆಮನೆಗೆ ಹೋಗಿ ಮಂತ್ರಾಕ್ಷತೆ ಕೊಟ್ಟು ಹೋಗಬೇಕು!

**ಸುಮಿತ್ರೆ**: ಇದು ಬಹುಸುಲಭ. ಜವಾನನೋ ಅಥವ 'ಪೋಸ್ಟ್ ಮನ್'ನೋ ತಂದು ಗದ್ದಲವಿಲ್ಲದೆ ಕಿಟಕಿಯಲ್ಲೆಸೆದು ಹೋಗುವನು. ನಾವಂತೂ ಊಟಕ್ಕೆ ಸಿದ್ಧವೇ!

**ಚಂಚಲೆ**: ಅಷ್ಟಲ್ಲದೆ ಏನು? ಗೊಡ್ಡುಗಳಂತೆ ನಾವು ಮಡಿಗಿಡಿಯೆಂದೆ ಗರಾಡುತ್ತೇವೆಯೇ? ಅವರಿಗೆ ನಾಲ್ಕು ಜನ ಸೇರಿದಕಡೆ ಆಶೌಚ, ಅಸಿಷ್ಟಗಳೆಲ್ಲವೂ ಬರುವುವಂತೆ!

**ಸುಮಿತ್ರೆ**: ಜಿಡಿ ಜಿಡಿ-ಅಂದ್ರೆ, ಅವರದಿದ್ದೇ ಇದೆ ಗೋಳು! ನಮ್ಮ 'reformed party' ನೋಡಿ! ಯೆಷ್ಟು 'civilised' ಆಗಿ ಹೋಗಿದೆ!—ಸುಲೋಚನೆಯ ಮನೆಯಲ್ಲಂತೂ—'Dinner tables, plates, cups and saucers, forks and spoons' ಇಲ್ಲದೇ ಊಟವೇ ಆಗುವುದಿಲ್ಲ!—

**ಮಧುರವಾಣಿ :** ಹೌದು-ಹೌದು- 'civilisation' ಅನ್ನೋದು— ಗೌರೀ ಶಂಕರದಷ್ಟು ಉನ್ನತ ಸ್ಥಿತಿ ಹೊಂದಿದೆ. ಮತ್ತೇನು ಬೇಕು ?

**ಚಂಚಲೆ :** ನಮ್ಮ ಜಮಾನರನ್ನೂ-ಸೀಮೆಗೆ ಕಳುಹಿಸಿದ್ದರೆ ಬಹು ಚೆನ್ನಾಗಿ ರುತ್ತಿದ್ದಿಲ್ಲವೇ ?

**ಸುಮಿತ್ರೆ :** ನಾನೇನೋ ಹೋಗೆಂದು ಹೇಳಿದೆ-ಅವರು ಕೇಳಬೇಕಲ್ಲಾ. ಈಗ ಸಂಪಾದಿಸುವುದಕ್ಕೆ ಬಾಯ್ಬಾಯಿ ಬಿಡ್ತಾರೆ.

**ಶಾಂತಿಪ್ರದೆ :** ಈಗಿನ ಕಾಲದಲ್ಲಿ ಪ್ರತಿಯೊಬ್ಬರಿಗೂ, ಮುಳುಗುವವನ ಕೈಗೆ ಜೊಂಡು ಸಿಕ್ಕಿದಂತೆ-ಆ ರಾಷ್ಟ್ರಪ್ರೇಮದ ಚಿಸ್ಥೆಯಂತೆ !— ಅದೊಂದು ಸಿಕ್ಕಿದೆ ! ನಮ್ಮವರೂ ಯಾವಾಗಲೂ ಅದರಲ್ಲಿಯೇ ಕಾಲ ಕಳೆಯುತ್ತಿದ್ದರು. ಆ ಚರಕವನ್ನೆತ್ತಿ ಬಿಸುಟು-ಅವರಿಗೆ ' fashions' ಅಷ್ಟು ತಿದ್ದಿ ಹಾಕಿದೆ ನೋಡಿ ಅವರೂ ಬರ್‍ತಾರೆ-ಏನು ' up-to-date ' ಆಗಿದೆಯೋ.

[ಮೂವರು-'suit' ಧರಿಸಿದ ' gentlemen ' ಗಳು ಪ್ರವೇಶಿಸುವರು. ಒಬ್ಬನು ಕಾಲಿಗೆ ಬೂಡ್ಸು, ಕಾಲುಚೀಲ ಹಾಕಿಲ್ಲ; ಮತ್ತೊಬ್ಬನು ಜುಟ್ಟು ಗಂಟು ಕಟ್ಟಿ ಮೇಲೆ ಹ್ಯಾಟ' ಹಾಕಿದಾನೆ. (ಮಗದೊಬ್ಬ) ಕ್ಲೋಸ' ಕಾಲರ' ಕೋಟ' ಹಾಕಿ ಕುತ್ತಿಗೆಗೆ 'ಟೈ' ಬಿಗಿದಿದಾನೆ-ಎಲ್ಲರ ಬಾಯಲ್ಲೂ ಚುಟ್ಟಾ-ಠೀವಿಯಿಂದ ಆತಿಥ್ಯ ಸ್ವೀಕರಿಸಲು ಹೊರಟದಾರೆ]

**ಮಧುರವಾಣಿ :** 'ಗ್ರ್ಯಾಂಡ್ ಆಗಿದೆರೀ' ! ಏನು-'ಸಿಂಪಲ್'!-ವೆಸ್ಟರ್ನರ್ಸ್ ಕೂಡ-ಲಾಯಕ್ಕಿಲ್ಲರೀ-ಇವರ ಮುಂದೆ !

**ಒಬ್ಬನು :** 'ಪಂಕ್ಚುಯಲ್' 'punctual' ಆಗಿ-ಊಟಕ್ಕೆ ಹೋಗಬೇಕು- ಇಲ್ಲದಿದ್ದರೆ ಮುಖ ಪೆಚ್ಚಾಕ್ಕೊಂಡು ಹಿಂತಿರುಗಬೇಕಾದೀತು. ನಡೀರಿ.

**ಮಧುರವಾಣಿ :** ಹೌದು. ಅದೂ ಕಷ್ಟ. ಮನೇಲಿ, ಅಡಿಗೆ ಮಾಡಿಲ್ಲ. ನಡೀರಿ. ಮೊದಲು ಹೋಗಿ ಮೇಜಿನ ಮುಂದೆ ಕೂಡೋಣ. [ಹೋಗುವರು]

## ಸ್ಥಾನ ೩

[ಜಯು ಮನೆ. ಬಹು ಆನಂದದಿಂದ ಎಲ್ಲರೂ ತಮ್ಮ ಸ್ನೇಹಿತರೊಡನೆ ಭುಜಿಸುತ್ತಿರುವರು]

**ಇಂದಿರೆ:** ನಮ್ಮ ಮುಖ್ಯ ಅಭ್ಯಾಗತರಾದ ಜಯಕುಮಾರರವರು ಪುನಃ ತಮ್ಮ ಪದವಿಯನ್ನು ಸ್ವೀಕರಿಸಿ ಕೆಲವು ದಿನಗಳಾದವು. ಅವರ 'Mistress' ರವರು ಈ ಸಂದರ್ಭದಲ್ಲಿ ಗೌರವದಿಂದ ನಮ್ಮೆಲ್ಲರನ್ನೂ ಬರಮಾಡಿಕೊಂಡು ಆದರಿಸುತ್ತಿರುತ್ತಾರೆ. ಅವರ ಸೌಖ್ಯವನ್ನು ಬಯಸಿ, ಈ ಪಾನೀಯವನ್ನು ಕುಡಿಯುವಂತೆ ನಾನು ಅರಿಕೆ ಮಾಡಿ ಕೊಳ್ಳುವೆನು. [ಗ್ಲಾಸನ್ನು ಮೇಲಕ್ಕೆ ಎತ್ತಿ ಹಿಡಿಯುವಳು]

**ಎಲ್ಲರೂ:** ಸಮ್ಮತವು, ಸರ್ವಸಮ್ಮತವು. (ಚಪ್ಪಾಳೆ) [ಕುಡಿಯುವರು.]

**ಜಯು:** [ಎದ್ದು ಮುಂದೆ ಬಂದು] ಸ್ಕೂಲಿನ ಕಡೆ ತಿರುಗಿ ನೋಡಿ ನಾಲ್ಕೈದು ದಿನಗಳಾದವು. ಇನ್ಸ್ಪೆಕ್ಟರವರು ಬರುವರೆಂದು ತಂತಿ ಬಂದಿರುವುದು. ನಾನು ನಿಮ್ಮ ಸುಖವೃಂದದಿಂದ ಕೆಲವು ನಿಮಿಷಗಳು ವಿರಾಮ ಬೇಡುವೆನು.

**ಒಬ್ಬನು:** ಅದಾಗದು—ಮುಖ್ಯರಾದ ತಾವೇ ಹೊರಟಮೇಲೆ ನಮ ಗೇನು ಕೆಲಸ, ನಾವೂ ಹೊರಡುವೆವು.

**ಸುಲೋಚನೆ:** ಹಾಗಲ್ಲ ದಯವಿಟ್ಟು ನೀವೂ ಕೂಡಿ, ನಾನವರಿಗೆ ಬುದ್ಧಿ ಹೇಳುವೆನು. [ಜಯು ಕಡೆ ತಿರುಗಿ] ಮಹಾ ಪಾಶ್ಚಿಮಾತ್ಯ ಪದ್ಧತಿಗಳ ನ್ನನುಸರಿಸಿ ನಡೆಯಬೇಕೆಂದು ಕೊಚ್ಚುವಿರಲ್ಲಾ, ಅವರು ಹೀಗೆಯೇ ಸಂತೋಷ ಕಾರ್ಯದ ಅರ್ಧದಲ್ಲೆದ್ದು ಹೋಗುವರೇ? ರಜಕ್ಕೆ ಬರೆದು ಕಳುಹಿಸಿಬಿಡಿ. ಇನ್ಸ್ಪೆಕ್ಟರು ಬಂದರೆ ಹಾಗೆಯೇ ಹೋಗ್ತಾರೆ.

**ಜಯು:** ಹುಚ್ಚಿ, ಮನ್ನೆಯಲ್ಲಾ ಆಗಿರುವ ಪ್ರಾಯಶ್ಚಿತ್ತ ಸಾಲದೇ? ಪುನಃ ನನ್ನನ್ನು ಮೂಲೆಯಲ್ಲಿ ಕೂಡೆನ್ನುವಿಯೇನು? ನಾನು ಹೇಳಿ ದಂತೆ ಈ 'function' ನ್ನ ಕೆಲವು ದಿನಗಳು ತಡೆದು, ನಡಿಸಿದ್ದರೆ ಚೆನ್ನಾಗಿರುತ್ತಿರಲಿಲ್ಲವೇ?

**ಸುಲೋಚನೆ:** ಅದಕ್ಕೇನೋ ನನ್ನ ಮೇಲೆ 'so hot' ಆಗಿರೋದು! ತಿಳಿಯಿತು 'alright' ಹೊರಡಿ—ನಾವೇನು ಹಬ್ಬ ನಿಲ್ಲಿಸುವುದಿಲ್ಲ. ಮನದಣಿಯುವಂತೆ ತಿಂದು, ಹಾಡಿ, ಕುಡಿದು, ಕುಣಿಯುವೆವು. ನಿಮಗಿಷ್ಟವಿದ್ದರೆ ಬನ್ನಿ ಇಲ್ಲದಿದ್ದರೆ ಮತ್ಯಾರಾದರೂ ನನ್ನ ಜೊತೆಯಲ್ಲಿ ಕುಣಿಯುವರು.

**ಜಯು:** 'Right' ಆದದ್ದೆಲ್ಲಾ ಆಗಿಯೇ ತೀರಬೇಕು. ಕೆಲಸ ಹೋದರೂ ಚಿಂತೆಯಿಲ್ಲ. ಕುಣಿದು ಸಂತುಷ್ಟನಾಗುವೆನು. ಆ 'Gramophone' ಆದರೂ ಹಾಕಿ ಅಷ್ಟು 'Dancing tune plates' ಹಾಕು.

[ಇನ್ಸ್‌ಪೆಕ್ಟರವರು ಪ್ರವೇಶಿಸುವರು.]

**ನಂಜ:** [ಸಭೆಯಕಡೆ ತಿರುಗಿ] ಇನ್ಸ್‌ಪೆಕ್ಟರ್ ಸಾಹೇಬರು!............

**ಜಯು:** ಇದ್ಯಾವುದಪ್ಪಾ ಈ ವ್ಯಕ್ತಿ!

**ಒಬ್ಬ:** 'Some uninvited guest.'

**ಮತ್ತೊಬ್ಬ:** ಹುಶ್! ಹುಶ್!........ಹೈ! ಹೈ!........'Get out'

**ಇನ್ನೊಬ್ಬ:** ಬನ್ನಿ, ಬನ್ನಿ—'Come and dance with me.'

**ಜಯು:** ಶಿವಪೂಜೆಯಲ್ಲಿ ಕರಡಿ ಅಡ್ಡ ಬಂತಲ್ಲಪ್ಪಾ. ನೂಕಿರೋ—ಜವಾನರುಗಳಿರಾ—ಮಾರಾ, ತಿಮ್ಮಾ, ನಂಜಾ.

**ನಂಜಾ:** ಕಾಲಿಗೆ ಬುದ್ಧಿ ಹೇಳಿ ಬುದ್ಧಿ! ಅವ್ನೋರು ರೇಗವ್ರೆ.

[ಈಚೆಗೆ ಬಂದು]

**ಇನ್ಸ್‌ಪೆಕ್ಟರ್:** ನಿಮ್ಮಾಯರು ಕುಡದಿಲ್ಲವೇನೋ—ನಿಜಾ ಹೇಳೋ.

**ನಂಜಾ:** ಸತ್ಯವಾಗಿಯೂ ಇಲ್ಲ, ಅಂತ ಹೇಳು ಅಂತ ಹೇಳಿದರು ಬುದ್ಧಿ.!

**ಇನ್ಸ್‌ಪೆಕ್ಟರ್:** ನೀನು ನಿಜ ಹೇಳೋ.

**ನಂಜಾ:** ಅದೇನೋ ಕೆಂಪಗಿತ್ತು ಬುದ್ಧಿ. ಕಲ್ಲೆಂಡಾನೂ ಅಲ್ಲ, ಹುಳೀ ಮಜ್ಜಿಗೇನೂ ಅಲ್ಲ.

**ಇನ್ಸ್ಪೆಕ್ಟರ್ :** ಇದೇನು ಹಬ್ಬವ್ರೋ ಈವತ್ತು ?

**ನಂಜಾ :** ಸಾಮೀವ್ರ 'ಕೆಲ್ಸ' ಪುನಃ ಸಿಕ್ಕಿದ್ದಕ್ಕೆ 'ಸಪ್ಪಂಟಾ' ಗಿತ್ತಲ್ಲಾ ವೊನ್ನೆ.

**ಇನ್ಸ್ಪೆಕ್ಟರ್ :** ಇನ್ನು 'ಸಸ್ಪೆಂಡ್-ಗಿಸ್ಪೆಂಡ್' ಆಗೋದಿಲ್ಲಾ ಮನೇ ಕಡೇ ಹೋಗೋದೇ ಖಾಯಂ. [ಹೋಗುವರು]

## ಸ್ಥಾನ—೪.

[ಗೋಪಾಲಶೆಟ್ರು ಪ್ರವೇಶಿಸಿ]

**ಶೆಟ್ಟಿ :** ಯೇಮಿ ದಾವಾ ಯೇಶ್ತೇಸೂ-ಅಸಲೊಚ್ಚೇ ಅಷ್ಟೇಲೇದೇ—ಬಾಪಾ-ಅಂತಾಪೊಯಿನೇ-ವೀಣೆಂಟಿಲೋ ಪಾತ್ರ-ಲೇ !-ಚಂಬು-ಲೇ- ; ದುಡ್ಡು-ಲೇ—ಕಾಸೂ-ಲೇ ;-ಯೆಂಡೀ-ಲೇ-; ಬಂಗಾರೂ—ಲೇ-ಇಂಕ ದುಡ್ಡೊಚ್ಚೇದಿ ? ಒಲು ಕಷ್ಟಪಡಿ ಶಂಪಾದಿಸ್ತಿವೇ !—ಯೆಪ್ಪಿ್ರಕೀ ವೊಕ್ಕಾಸೂ—ವೋಸವ್ಯೇಲೇದೇ-ಅಷ್ಟಾ ಕಾಸೇ ಪೋಯಿನೆ...........

**ಫೋರ್ ಖಾ :** [ಚುಟ್ಟಾ ಕುಡಿಯುತ್ತಾ ಪ್ರವೇಶಿಸಿ] ಪ ಕಾಫರ್-ವ್ರುಟ್-ಹಮ್ನಾ ಸಲಾಂಕರೋ !—ಸಾಮಿಾ ಕೆತ್ತಾದಿಯಾ ತುಮ್ನಾ ?

**ಶೆಟ್ಟಿ :** ತಾಳ್ಸಾಹೇಬೂ—ಮಾಚಿಂತಾಮಾಕಿ-ನೀ ಮಜಾಕು ನೀಕಿ-ಲೆಖ್ಖತೀನ್ಸಿ

**ಫೋರ್ ಖಾ :** ಮಜಾ—ಮಜಾ-ನಮ್ಕೂ ಯಾವಾಕೀ ಮಜಾಖತೇ-ತುಂಕ್ಯಾ ಬೋಲೋದಿ. ಏಕ್ ಚುಟ್ಟಾ ಪಿಯೇಗಾ—ತುಂ.

**ಶೆಟ್ಟಿ :** ಗೋಶೇಸ್ತೇನೇ ಮಾ ಅಬ್ಬಯ್ಯ ಶಂಪೇಸ್ತಾಡು-ಎನಿಮಿದಿಮೂರ ಪಂಚೇ-ಅನಿ, ಇಂಕ ಬೀಡೀಲು!-ಪೊಗೊತ್ತೀಲು,-ಅಗ್ಗಿಪೆಟ್ಟೆ-ಇದಂತ ತಾಗ್ತೆ-ಮಾರೆಮ್ಮ ಬಲೇ-ವಡ್ಡೇಮಿ ರೂಪಾಯಿಕಿ ಮೂಡೇ ಕಾಸುಲು-ನೆಲಕಿ-ಪಾಪಂ, ಪೋನಿ ಐವಾರಿಕಿ !

**ಫೋರ್ ಖಾ :** ಮ್ಯೆ ಏಕ್ ಕಾಸ್ ಲೇತಾ-ಭಲಾರೆಶೆಟ್ಟಿ ತೂ ! ತೀನ್ ಲೇತಾ. [ಮೂರು ಬೆರಳು ತೋರಿಸುವನು]

**ಶೆಟ್ಟಿ:** ಅವ್ರುಸಯ್ಯಾ ಮೇವು ಮೂಡ್ಡಾನಾಲೇ ಪೆಟ್ಟಿಂಡೇದಿ-ಮಾ ಅಕ್ಕಯ್ಯೇ ಪದ್ದುಸ್ನೇಸೇ ಪೆಟ್ಟಿ-ನೀಕದೇಲೇದು-ತುರುಕೋಡೇಮಿ ಜಂಭಂಜೇಸ್ತಾವಯ್ಯಾ !

**ನಂಜಾ:** ಏ ! ಹೋಗಿ-ಹೊರಗೆ ಹೋಗಿ-ಇಲ್ಲಿ ಗಲಾಟೆ ಮಾಡ್ಬೇಡ ಅಪ್ನೋರು-ಬೈತಾರೆ !

**ಷೋೕರ್ ಖಾನ್:** ಕ್ಯಾರೇ-'ಏಗೀ' ಕತಾ-ವ್ಯೆ ಥೂಕ್‌ದಾಲಿಂಗಾ-'ಹಂ ಸಾಪಿಸಾಕ ಬಾವಾ' ತುಂ ಸೈಬೋಲ್ತೇ-'ಸಾಲದಪ-ಮಗ' ಕರ್‍ಕ್ಕೆ-ಬಿಟ್ಟಿ ಜೊಡ್ಡಾಲ್ತೇಕ್ಯಾ.

**ನಂಜಾ:** ಬೊಯ್ತೀಯೇನೋ ? ಅಮ್ಮಾವ್ರ ಹತ್ತಿರಾ ಹೇಳ್ತೀನಿ.

[ಇನ್‌ಸ್ಪೆಕ್ಟರು ಮಾಧವನೊಡನೆ ಪ್ರವೇಶಿಸುವರು. ಶೆಟ್ಟಿ ,ಮತ್ತು ಖಾನ್ ಡಿಕ್ರೀಗಳ ಕಾಗದವನ್ನವರ ಕೈಗೆ ಕೊಟ್ಟು]

**ಶೆಟ್ಟಿ:** ದೇವುಡಾ-ಮಾ ಇಲ್ಲು ಕಿಲೀನ್ ಐಪೋಯಾ-ಅಂಗಡಲೋ ವುಂಡೇ ಸರಕಂತಾ-ವೀಳ್ಳಿಕೇ ಆಯೆ-ಮೂಡವೈಯಿ ಏಡಿ-ಏಡಿ ನೂರ ರೂಪಾಯಿ ಬಾಕಿ ಆಯೆ.

**ಷೋೕರ್ ಖಾನ್:** [ಕೋಪದಿಂದ] ಮ್ಯೆ-ಗೌರ್ನಮೆಂಟ್ಕು ವುಡಾದಾಲ್ತು ! ಹುಷಾರ್ !! ಸಮ್ಯೊ ಕಷ್ಟಪಟ್ಟಿ ಸಂಪಾದಿದ್ದು-ಕಾಸು. ಅಸಲ್ ಪಾಂಚ್‌ಸೌ ! ಬ್ಯಾಸ್ ಸಬ್ಬಿ ಆಟ್‌ಸೌ—(೮೦೦ ರೂ.)

**ಇನ್‌ಸ್ಪೆಕ್ಟರ್:** ಆಗಲಿ-ನೋಡುವ-ನಿಮ್ಮ ಹಣವೆಲ್ಲಿಯೂ ಹೋಗದು ನೀವೀಗ ಹೋಗಿ. [ಇಬ್ಬರೂ ಹೋಗುವರು]

**ಇನ್‌ಸ್ಪೆಕ್ಟರ್:** [ಮಾಧವನೊಡನೆ] ನೀವು ಹೇಳುವಂತೆ ಆತನೇನೂ ಅಷ್ಟು ಗುಣವಂತನಾಗಿ ಕಾಣುವುದಿಲ್ಲ. ನನಗಂತೂ ಆತನ ಮೇಲೆ ಎಳ್ಳಷ್ಟೂ ಕನಿಕರವಿಲ್ಲ.

**ಮಾಧು :** ಆತನ ನಡತೆಗೆ, ಆತನೇ ಕಾರಣನಲ್ಲ-ತಾನೊಬ್ಬ ನೀಚಸ್ತ್ರೀಯ ಕೈಲಿ ಸಿಕ್ಕಿ ಈ ರೀತಿಯೆಲ್ಲವೂ ಕುಣಿಯುತ್ತಿರುವನು.

**ಇನ್ಸ್ಪೆಕ್ಟರ್ :** ಅದನ್ನು ನಾನು ನಂಬಲಾರೆ ಆಕೆಯು ಶೀಲವಂತಳಲ್ಲದಿದ್ದರೆ-ಹದ್ದಿನಲ್ಲೇಕಿಡಬಾರದಾಗಿತ್ತು ?

**ಮಾಧು :** ಹದ್ದಿನಲ್ಲಿಡಲು ಆಕೆಯು ಹೆಂಗಸಲ್ಲ-ಆತನ ಪಾಲಿನ ಬ್ರಹ್ಮರಾಕ್ಷಸಿ. ಅವನದೇನೂ ನಡೆಯದು-ದಯವಿಟ್ಟು ಈಸರ್ತಿಯಾದರೂ ಕ್ಷಮಿಸಿ-ತಿನ್ನುವ ಅನ್ನಕ್ಕೆ ಕಲ್ಲಾಕಬೇಡಿ-ಎಲ್ಲಾ ತಮ್ಮ ಕೈಲಿದೆ.

**ಇನ್ಸ್ಪೆಕ್ಟರ್ :** ಆಗಲಿ-ನನ್ನ ಕೈಲಾದಮಟ್ಟಿಗೂ ನೋಡುವೆನು-ಆದರೆ ಮೊದಲು ಬುದ್ಧಿ ಕಲಿಸಬೇಕು. [ಹೊರಟು ಹೋಗುವರು]

---

# ಅಂಕ ೫.

## ಸ್ಥಾನ ೧.

[ಜಯಕುಮಾರನ ಮನೆ—ಶೆಟ್ಟಿ, ಅಮೀನ ಇಬ್ಬರೂ ಮನೆಯಲ್ಲಿನ ಸಾಮಾನುಗಳ ಹರಾಜಿಗೆ ಬಂದಿದಾರೆ (ಜಫ್ತಿ) ಒಂದು 'ಟೀ' ಪಾಯ್ ನಾಲ್ಕೈದು ಕುಡಿವ ಲೋಟ ಮುರಕು ಖುರ್ಚಿ ಹರಾಜು ಕೂಗುವರು]

**ಜಯು :** ಹಿಂದಿನ ಸ್ಥಿತಿಗೇ ಪುನಃ ಬಂದುದಾಯಿತು. ಈಗ ನನ್ನ ಸುಲೋಚನೆಯುಎಲ್ಲಿಂದ ಹಣ ತರುವಳೋ ಕಾಣೆ ; ನಾನು ಹೇಳಿ ಹೇಳಿ ಸಾಕಾದರೂ, ಆಕೆಗೆ ಬುದ್ಧಿ ಬರಲಿಲ್ಲ ನನ್ನನ್ನೂ ಈ ದುರವಸ್ಥೆಗೆಳೆದಳು ಈಗಲೂ ಹಣಕ್ಕಾಗಿಯೇ ಹೋಗಿರುವಳು. ಅಷ್ಟರಲ್ಲಿ ಇವರ ಕಾಟ ಹೆಚ್ಚಾಗಿದೆ.

**ಅಮೀನಾ** ಇನ್ನೂ ಏನೇನು ಸಾಮಾನುಗಳಿವೆ ಒಳಗೆ?

**ಶೆಟ್ಟಿ :** [ಒಳಗಿನಿಂದ ಪ್ರವೇಶಿಸಿ] ಇಂಕಾವುಂದಿ ಕಾಪಿಗ್ಲಾಸು! ಅಗ್ಗಿಪೆಟ್ಟೆ! ಚಿಮ್ಣಿಬುಡ್ಡಿ !

**ಜಯು :** ಅದು ಚಿಮ್ನಿಯಲ್ಲಾ ' ಬೆಡ್ ರೂಂ ಲ್ಯಾಂಪ್ '

**ಶೆಟ್ರು :** ನೀವು ಮಾಟ್ಲಾಡೊದ್ದೈವಾರ ! ಕಡವುಲೋ. ಅಗ್ಗಿಪಡ್ತುಂದಿ–ನೀಇಂಟ್ಲೋ, ವುಂಡೇದಂತಾ ಅಮ್ತೇನೂ ರೆಂಡನ್ನರಕಾಸು ಪುಟ್ಟೇಲಿ ಅಪ್ಪು ! ಜೂಸ್ತೆ ಮೂಡವೇಲ, ಏಡಿನೂರು [ಮೆಲ್ಲನೆ] ದಿಂಟ್ಲೊ ನಾಕೀ ವಸ್ತುಂದಿ ಮೂಡಣಾಲು ಆರ್ಕಾಸಲು ವಗಗ್ಗಿಪೆಟ್ಟೇ ನೀ ಇಲ್ಲು ಕಾಲ್ನೆದಾನಿಕಿ

**ಅಮೀನ :** ಮನೆಯಲ್ಲಿದ್ದ ಮಂಚಗಳು, ಕುರ್ಜಿ, ಮುಂತಾದುವೂ ಭಾರಿ ಭಾರಿ 'Suit'ಗಳೂ ಇವೆಲ್ಲಾ ಏನಾದುವು? 'Gramophone' ಎಲ್ಲಿ?

**ಜಯು :** ಅವು ನಮ್ಮದಲ್ಲ ಬಾಡಿಗೆಗೆ ತಂದಿದ್ದೆವು ಅವರು ತೆಗೆದು ಕೊಂಡುಹೋದರು.

**ಶೆಟ್ರು :** ಇಂತೇನಾ ಆಸಾಮಿ ಬಂಡವಾಳಮು ಪೋಯಿನೇ ಅಂತಾ ಪೋಯಿನೇ ಅಗ್ಗಗ್ಗೇ ಪಡ್ತುಂದೆ !

**ಜಯು :** ನಿಮ್ಮ ಸಾಲಗಳನ್ನು ತೀರಿಸದೆ ಈ ಪಾಪಿ ಜನ್ಮ ಬಿಡುವುದಿಲ್ಲ. ಸೆಗಣಿಯಾದರೂ ಹೊತ್ತು ನಿಮ್ಮ ಋಣ ತೀರಿಸುವೆನು ದಿಗಿಲು ಪಡಬೇಡಿ

**ಶೆಟ್ರು :** ಭಯಮೇಮಿ ? ಶಲ್ಲಗಾಯ ಕಡುಪುಲೊ !

**ಅಮೀನ :** [ಹರಾಜ್ ಕೂಗುವನು-೨-೩ ರೂ ಆಗುವುದು]

[ಎಲ್ಲರೂ ಹೊರಟುಹೋಗುವರು]

## ಸ್ಥಾನ ೨.

[ಸುಲೋಚನೆಯ ಮನೆ—ಸುಲೋಚನೆ ಹೊರಗಿನಿಂದ ಪ್ರವೇಶಿಸಿ]

**ಸುಲೋಚನೆ :** [ದುಃಖಾತಿಶಯದಿಂದ] ಯಾವ ಗುಹೆಯಲ್ಲಡಗೋಣ ? ಯಾರ ಮನೆಯಲ್ಲಿ ಒಚ್ಚಿಟ್ಟುಕೊಳ್ಳೋಣ ? ತಲೆ ಒಡೆದುಕೊಂಡರೂ ದಿಕ್ಕು ಕಾಣದು—ಕೇಳಿದ ತಕ್ಷಣವೇ ಬೇಕಾದಷ್ಟು ಹಣಕೊಡುತ್ತಿದ್ದವರು, ಇಂದೆಲ್ಲರೂ ಕೈಬಿಟ್ಟರು ! ನನ್ನಲ್ಲಿ ಬಂದು ಮೃದು ಮಾತುಗಳಾಡಿ ಕಸಿದು ತಿನ್ನುತ್ತಿದ್ದವರೆಲ್ಲರೂ ಎಲ್ಲಿಯೊ ಅಡಗಿಕೊಂಡರು ! ಸಾಲಗಾರರ ಕಾಟ ತಡೆಯುವುದು ಹೇಗೆ ? ಎಲ್ಲಿಗೆ ಓಡಿಹೋಗುವುದಕ್ಕೂ ದಿಕ್ಕು ಕಾಣದು. ನಮ್ಮ ಜವಾನರನ್ನು ಬಿಟ್ಟಿರುವುದು ಹೇಗೆ ! ನನ್ನಿಂದಲ್ಲವೇ ಅವರಿಷ್ಟು ಕಷ್ಟಕ್ಕೆ ಸಿಲುಕಿದರು ; ಕೆಲಸ ಹೋಯಿತು, ಮಾನಮರ್ಯಾದೆಗಳಿಲ್ಲದಾದುವು ; ಆದರೂ ನನ್ನನ್ನು ಬಿಡಲಿಲ್ಲ. ನನ್ನಿಂದಲ್ಲವೇ ಅವರು ಆತ್ಮಹತ್ಯಕ್ಕೂ ಹಿಂಜರಿಯದಾದರು.—ದೇವರೇ ಅಡ್ಡಬಂದು ಕಾಯ್ದನೆಂದಾ ದಿನ ಹೇಳಿದ್ದರು ! ಇಂದೂ ಆ ದೇವರೇಕೆ ಬಂದು ಕಾಪಾಡಬಾರದು ? ಗೋವಿಂದರಾಯರು, ಮಾಧವನು ಎಂಥ ಸಮಯದಲ್ಲಿ ನಮಗೆ ನೆರ

ವಾಗಿ ಎಷ್ಟು ಸಹಾಯಮಾಡಿದರು ! ಅವರನ್ನು ಅಹಂಕಾರದಿಂದ ಜರಿದೆನಲ್ಲವೆ? ಈ ದಿನದಲ್ಲಿ ಕಾಫಿ ಕೂಡ ಕುಡಿಯದೆ ಅನ್ನಾಹಾರಗಳಿಗೆ ಮಾರ್ಗವಿಲ್ಲದೆ ಕಷ್ಟಪಡುತ್ತಿರುವಾಗ ಮಾತನಾಡಿಸುವವರು ಕೂಡಾ ಇಲ್ಲದಾಯಿತು. ಸರಿಯೆ ! ಇರಲಿ !! [ನಿಟ್ಟುಸಿರು ಬಿಟ್ಟು]

ನನ್ನ ಪ್ರಾಯಶ್ಚಿತ್ತಕ್ಕಾಗಿ ಯಾವ ದೇವರನ್ನು ಮೊರೆ ಹೊಗಲಿ? ನಾನೇಕೆ ನಮ್ಮ ಆಚಾರಗಳನ್ನು ತ್ಯಜಿಸಿ, ಧರ್ಮವಿರುದ್ಧವಾಗಿ ನಡೆದು, ಮನಬಂದವರೊಡನೆ ಕಲೆತು, ಇಲ್ಲದ ವೆಚ್ಚ ಮಾಡಿದೆ? ಸುಂದರಾಬಾಯಿಯು ಹೇಳಿದೊಡನೆ ನಾನು ಎಚ್ಚೆತ್ತಿದ್ದರೆ ಹೀಗಾಗುತ್ತಿದ್ದೆನೆ? ನಡೆದುಹೋದ ಕಾರ್ಯಗಳಿಗೀಪರಿ ತಪಿಸುವುದರಿಂದ ಫಲವೇನು? ಇರಲಿ—ಅಜ್ಞಾನದಿಂದ ಯಾವರೀತಿ ಕುಣಿದರೂ ಸರಿಹೋಗುವುದೆಂದು ತಿಳಿದಿದ್ದೆ. ಆದರೆ ಈಗ ನನಗೆ ಬಹು ಚೆನ್ನಾಗಿ ಅನುಭವವಾಯಿತು. ಸ್ತ್ರೀಯರಿಗೆಷ್ಟೇ ಐಶ್ವರ್ಯ, ಬುದ್ಧಿ, ಕುಶಲತೆಗಳಿದ್ದರೂ, ಅವರ ಬಾಹ್ಯವರ್ತನೆಗಳನ್ನು ಸರಿಪಡಿಸುವವನೊಬ್ಬ ಚತುರನಾದ ಗಂಡಾಳಿತ್ತೆಂದರೆ ಆಕೆಯ ಜೀವನವು ಸುಖಿಸಿ ಇಹದ ಪುರುಷಾರ್ಥ ಸಿದ್ಧಿಸುವುದು. ಅದಿಲ್ಲದೆ, ಹೋದದಾರಿಯಲ್ಲೇ ಬಿಟ್ಟರೆ—ನಾವಿಕನಿಲ್ಲದ ನಾವಿಯಂತೆ ದಡಕ್ಕೆ ಹೊಡೆದೊಡೆಯಬಹುದಲ್ಲವೇ?

[ಕೊಂಚ ಧೈರ್ಯದಿಂದ] ಇಂದು ನಮ್ಮ ಜಮಾನರ ಕೆಲಸ ಹೋಗಿರಬಹುದು! ಆದರೆ ನಾವೇನೂ ಬಿಕ್ಷುಕರಾಗಲಿಯುವುದಿಲ್ಲ; ಯಾವುದಾದರೊಂದು ಸನ್ಮಾರ್ಗದಲ್ಲಿ ಇಬ್ಬರೂ ದುಡಿದು ಸುಖಿಸುವೆವು. ಇಂದು ನಮ್ಮ ಜಮಾನರು ಪಾಪರ್ ಚೀಟಿಯನ್ನು ಪಡೆದಿದ್ದರೂ, ಸಾಲಗಾರರ ಹಣವನ್ನು ತೀರಿಸುವದಾಗಿ ಪ್ರತಿಜ್ಞೆಮಾಡಿರುವುದರಿಂದ, ಅದಷ್ಟು ಮಿಗಿಸಿ ಕೈಹಿಡಿದು ಸಂಸಾರಮಾಡಿ ಋಣಮುಕ್ತರಾಗಿ ಬಾಳುವೆವು—ದೇವರಿದಾನೆ—ಸುಂದರಮ್ಮನವರ ಕ್ಷಮೆ ಬೇಡಿ ಮುಂದಿನಾಲೋಚನೆ ಮಾಡುವೆನು.

**ಸುಂದರಮ್ಮ:** [ಪ್ರವೇಶಿಸಿ] ಸುಲೋಚನೆ! ಏಕಿಷ್ಟು ಚಿಂತಿಸುತ್ತಿರುವೆ? ಬಹು ಬಳಲಿದ್ದಂತೆ ತೋರುತ್ತೆ ಯೇಕೆ?

**ಸುಲೋಚನೆ:** ಅಮ್ಮಾ ನಾನಪರಾಧಿ! ನಮ್ಮ ತಪ್ಪುಗಳನ್ನು ಮನ್ನಿಸಿ, ನಮಗ್ಯಾವುದಾದರೊಂದು ಮಾರ್ಗ ತೋರಿ. ಇನ್ನೆಡೆವುವುದಿಲ್ಲ, ನೀವು ಹೇಳಿದಂತೆ ನಡೆದು ಮುಂದಾದರೂ ಸೌಖ್ಯವನ್ನು ಪಡೆವೆವು.

[ಮನೆ ಒಳಗಿನಿಂದ ಜಯಮ್ಮ, ಇಂದಿರೆ—ಆಚೆನಿಂದ ಗೋವಿಂದರಾಯರು, ಮಾಧು, ಶ್ರೀನಿವಾಸರಾಯರೂ ಪ್ರವೇಶಿಸುವರು.]

**ಸುಂದರಮ್ಮ:** ಬಹು ಒಳ್ಳೆಯ ಸನ್ನಿವೇಶ, ಅಮ್ಮಾ ಲೋಕದಲ್ಲಿ ಜೀವ ಧಾರಣೆಗೆ ಯಾವದೊಂದು ಕೆಲಸ ಮಾಡಿದರೂ ನಡೆಯುತ್ತೆ. ಆದರೆ ನನಗೆ ತೋರುವ ಹಾದಿಯು ಒಂದೇ........

' ಚೇತೋಜನಾ ' ಬಾಣ-ಎಂಬಂತೆ

ಚಕ್ರಪಾಣಿಯ ಪೊಗಳಿ | ಚರಕವನು ತಿರುಗಿಸಲು |
ಪದುಮನಾಭನಪಾದ | ಕಿದು ಹಾದಿಯಹುದೋ || ಚಕ್ರ ||
ಪ್ರಾತಃಕಾಲದೊಳೆದ್ದು | ಮಹಾತ್ಮಗೊಂದಿಸುತೇ |
ಪ್ರೀತಿಯಿಂ ಎಳೆಸೂಲ | ಪರಮಪದ ಸೋಪಾನ || ೧ ||
ಹರುಷವೀವುದು ಪರಮ | ದುಃಖಪರಿಹಾರವೋ |
ಜೀವನದ ಜೀವಾಳ | ಚರಕದೊಳಗಿಹುದೋ || ೨ ||
ವಶಾನದಲಿ ಗಾಂಧಿಯಾ ಸ್ತುತಿಸುತ್ತೆ ಹಾಕಲಾ |
ನೂಲಮಾಲೆಯೇ ಕೊರಳ ಕಂಠಿಹಾರಾ || ೩ ||

ದೈವಸಮಾನರಾದ ' ಬಾಪೂಜಿ' ಯವರು ಕರುಣಿಸಿದ ಮಹಾಮಂತ್ರ.

**ಜಯಮ್ಮ, ಇಂದಿರೆ, ಸುಲೋಚನೆ:** ಸರ್ವಸಮ್ಮತವು. ನಾವಿದೇ ರೀತಿಯಿಂದ ಜೀವಿಸುವೆವು.

**ಜಯು :** [ಗೋವಿಂದರಾಯರಿಗೆ] ನಮ್ಮ ಅಪರಾಧಗಳನ್ನು ಕ್ಷಮಿಸಿ ಅಜ್ಞಾನಿಗಳಾದ ನಮಗೆದಾರಿ ತೋರಿಸಿ ಕಾಪಾಡಿರಿ.

**ಗೋವಿಂದರಾವ್ :** ಬಹು ವಿಚಿತ್ರ, ಪರಮ ಸಂತೋಷ. ನಮ್ಮ ಮನದಲ್ಲಿದ್ದ ಫಲಗಳೇ, ದೇವರ ಕೃಪೆಯಿಂದ ಫಲಿಸಿವೆ. ಜಯು ! ನಿಮಗಿಂತ ಇನ್ನು ಈ ಪ್ರಪಂಚಕ್ಕೆ ಅನುಭವವನ್ನು ಬೋಧಿಸಲು ಮತ್ಯಾರೂ ಅರ್ಹರಿಲ್ಲ, ಆಗಲಿ—ಇಂದು ನೀವೆಲ್ಲರೂ ಮಹಾತ್ಮಾ ಗಾಂಧಿಯವರ ಪ್ರೀತಿಗೊಳಗಾದಿರಿ. ನಿಮ್ಮ ನಿಮ್ಮ ತಪ್ಪುಗಳನ್ನು ಮರೆಯಿರಿ, ಎಲ್ಲರನ್ನೂ ಸನ್ಮಾರ್ಗಕ್ಕೆಳೆದ ಮಹಾತ್ಮನಿಗೆ ನಮಸ್ಕರಿಸಿ.

**ಎಲ್ಲರೂ :** ಬಹು ಸಂತೋಷ!

**ಸುಂದರಮ್ಮ :** ಇಂದಿರಮ್ಮನವರು ತಮ್ಮ ಪತಿಪಾದಗಳಲ್ಲಿ ಕ್ಷಮೆಬೇಡಿ ಇನ್ನು ಮುಂದೆ ಪವಿತ್ರ ಸಂಸಾರವನ್ನು ಸ್ಥಾಪಿಸಿರುವರು [ಇಂದಿರೆಯು ಶ್ರೀನಿವಾಸನಿಗೆ ನಮಸ್ಕಾರ ಮಾಡುವಳು]

**ಶ್ರೀನಿವಾಸ :** ಸಂತುಷ್ಟನಾದೆ-ನಮ್ಮ ಪ್ರೇಮವು ಪುನಃ ಚಿಗುರುವುದೆಂದು ಕನಸಿನಲ್ಲಿಯೂ ನೆನೆಯಲಿಲ್ಲ.

**ಗೋವಿಂದರಾವ್ :** ಸುಲೋಚನೆಯಂಥ ಸ್ತ್ರೀಯಳಿನ್ನಿಲ್ಲ-ಆಕೆಯಿಂದೊಡಗೂಡಿದ-ಸಂಸಾರವು, ನಂದಗೋಕುಲದಂತೆ ಬೆಳೆದು ಕಾಮಿತಫಲವನ್ನು ಕೊಡುವುದು. !

**ಇಂದಿರಮ್ಮ :** ಇದುವರೆಗೂ ಮಾತನಾಡಲಾಗಲಿಲ್ಲ. ಇನ್ನು ಮುಂದೆ ನಾನೂ, ಸುಂದರಮ್ಮನವರು ತೋರಿಸಿರುವಂತೆ ಧಾರವಾಡಿಯೇ ಜೀವಿಸುವೆನು.

**ಗೋವಿಂದರಾವ್ :** ಜಯು, ಇಂದಿರ, ಸುಲೋಚನೆ-ನೀವೆಲ್ಲರೂ ಈ ಚಿತ್ರಪಠದ ಮುಂದೆ ಎಷ್ಟೆ ಕಷ್ಟವಾದರೂ, ದಿನಕ್ಕೊಂದು ಗಂಟೆಯ ಕಾಲ

ಧಾರ ನೂಲುವಿರೆಂದು ಭಾಷೆ ನೀಡಬೇಕು. (ಎಂದು ಗಾಂಧಿಜಿಯವರ ಪಠ ವನ್ನು ತೋರಿಸುವನು.)

**ಎಲ್ಲರೂ :** ಬಹು ಸಂತೋಷ-ಹೃದಯದಾಳದಿಂದ ಭಾಷೆಯನ್ನಿತ್ತಿರುವೆವು.

**ಜಯು :** ಕೆಟ್ಟು ಹೋಗಿದ್ದವರನ್ನು ಸನ್ಮಾರ್ಗಕ್ಕೆಳೆದ ಮಹನೀಯರು ನೀವು—ನಾವುಗಳೆಂತು ನಿಮಗೆ ಕೃತಜ್ಞತೆಯನ್ನು ತೋರಿಸೋಣ.

**ಸುಂದರಮ್ಮ :** ಇಂತಹ ಸಂತೋಷ ಸಮಯದಲ್ಲಿ, ದರಿದ್ರ ನಾರಾಯಣ ನನ್ನೂ ಆತನ ದಾರಿದ್ರ ಸಂಹಾರಕ ಚಕ್ರ-ಚರಕವನ್ನೂ ಪೂಜಿಸ ಬೇಕೆಂದು ನನ್ನ ಇಚ್ಛೆ ; ನೀವೆಲ್ಲರೂ ಬರಬೇಕು.

**ಗೋವಿಂದರಾವ್ :** ಅಜ್ಞಾನಿಗಳಿಗೆ ಮೋಕ್ಷಮಾರ್ಗ ಕಾಣಿಸಿಕೊಟ್ಟವ ನನ್ನು ಪೂಜಿಸುವುದು ಪವಿತ್ರ ಧ್ಯೇಯ-ನಿನ್ನ ಅಭಿಮತವು ಸರ್ವಸಮ್ಮ ತವು. ಶುಭದಿನವಾದ್ದರಿಂದ ಇಂದೇ ಆಗಿ ಹೋಗಲಿ.

**ಎಲ್ಲರೂ :** ಪರಮಾನಂದ ಹಾಗೆಯೇ ಆಗಲಿ ಹೊರಡೋಣ

[ಹೊರಡುವರು]

## ಸ್ಥಾನ ೩.

[ದಿವ್ಯವಾಗಿ ಅಲಂಕಾರ ಮಾಡಿ, ಧೂಪದೀಪಗಳಿಂದಲೂ ನೂಲುಹಾರಗಳಿಂದಲೂ ಪೂಜಿಸು ತ್ತಿರುವ ಗಾಂಧಿ ಮಹಾತ್ಮರ ದಿವ್ಯಚಿತ್ರಪಠದ ಮುಂದೆಲ್ಲರೂ, ಕೈಮುಗಿದು ನಿಂತಿರುವರು.]

[ನಂಜನು ಒಂದು ಕಾಗದವನ್ನು ತಂದು ಗೋವಿಂದರಾಯರಿಗೆ ಕೊಡುವನು]

**ಗೋವಿಂದರಾವ್ :** ಸತ್ಯಮೂರ್ತಿಯ ಪೂಜಾಪ್ರಭಾವ-ಜಯು ನಿನ್ನ ಕೆಲಸವು ನಿನಗೆ ಪುನಃ ದೊರೆಯಿತೆಂದು ಪತ್ರ ಬಂದಿರುವುದು ! ನೋಡು!

**ಜಯು :** ನನಗೆ ಆ ಗುಲಾಮಗಿರಿಯ ಕೆಲಸವಿನ್ನೇಕೆ ? ನನ್ನ ಜೀವನಕ್ಕೆ ನನಗಷ್ಟು ದೊಡ್ಡ ಪದವಿಯೂ, ಹಣವೂ ಬೇಕಾಗಿಲ್ಲ. ಆದರಿಂದ ಪುನಃ ದೇವರನನ್ನು ಮರೆವೆನೋ ಕಾಣೆ ! ನನಗೆ ಬೇಡ ಈಗಲೇ ಬರೆದುಬಿಡುವೆನು.

**ಸುಲೋಚನೆ:** ಹಾಗೆಯೇ ಮಾಡಿ. ನಮಗೆ ನೂರು ರೂಪಾಯಿಗಳೇಕೆ! ಹತ್ತಾರು ರೂಪಾಯಿಗಳಾದರೆ ಸಾಕು. ಧಾರವಾಡಿ ಜೀವಿಸಿ. ನಮ್ಮ ದೇಶದ ಪೂರ್ವದ ಕೈಗಾರಿಕೆಗಳು ಪುನರುಜ್ಜೀವಿಸಲು ಸಹಾಯಕರಾಗಿ ಸುಖದಿಂದ ಬಾಳುವೆವು.

**ಗೋವಿಂದರಾವ್:** ನಮ್ಮ ದೇಶ! ನಮ್ಮ ಭಾಷೆ! ನಮ್ಮ ಕೈಗಾರಿಕೆಗಳು! ಎಂಬ ವಾತ್ಸಲ್ಯವು, ನಿಮ್ಮಲ್ಲೆಷ್ಟು ಮೂರ್ತಿಗೊಂಡಿವೆ! ಮುಂದೆ ನಿಮ್ಮಿಂದ ದೇಶೋದ್ಧಾರವಾಗುವುದರಲ್ಲಿ ಸಂಶಯವಿಲ್ಲ. ಜಯು ನೀನು ಬಾಪೂಜಿಯವರ ಪ್ರಭಾವದಿಂದ ದೊರೆತ ಫಲವನ್ನು ಸ್ವೀಕರಿಸು. ನಿನ್ನ ಉದರಭರಣಕ್ಕಾಗಿ ಆದಷ್ಟು ವೆಚ್ಚಮಾಡಿ ಮಿಕ್ಕದ್ದನ್ನು ಒಂದೇ ಹೊತ್ತು ಉಂಡು ಬದುಕುತ್ತಿರುವ ಬಡವರಿಗೆ ದಾನಮಾಡುತ್ತಿರು.

**ಜಯು:** ಪರಮಪವಿತ್ರ ಉಪದೇಶ. ಹಾಗೆಯೇ ಮಾಡುವೆನು.

**ಇಂದಿರೆ:** ನಾವೂ ನಮ್ಮ ಕೈಲಾದಷ್ಟೂ ದೇಶಸೇವೆ ಮಾಡಲು ಪ್ರತಿಜ್ಞೆ ಮಾಡಿರುವೆವು.

**ಗೋವಿಂದರಾವ್:** ಪರಮ ಸಂತೋಷ ಮಂಗಳಾರತಿಯಾಗಲಿ.........

— **ಮಂಗಳಂ** —



آخری درج شدہ تاریخ پر یہ کتاب مستعار
لی گئی تھی مقررہ مدت سے زیادہ رکھنے کی
صورت میں ایک آنہ یومیہ دیرانہ لیا جائے گا۔